# Y. SUBRAMANYARAJU

# ವೈ. ಸುಬ್ರಮಣ್ಯರಾಜು

ಎಸ್.ಎನ್. ಚಂದ್ರಶೇಖರ್



ಕರ್ನಾಟಕ ಲಲಿತಕಲಾ ಅಕಾಡೆಮಿ
KARNATAKA LALITHAKALA ACADEMY

# ವೈ. ಸುಬ್ರಮಣ್ಯರಾಜು
# Y. SUBRAMANYARAJU

ಎಸ್.ಎನ್. ಚಂದ್ರಶೇಖರ್




ಕರ್ನಾಟಕ ಲಲಿತಕಲಾ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು -560 002
(ದೂರವಾಣಿ ಸಂಖ್ಯೆ: 080-22480297)

**Y. SUBRAMANYARAJU:** A biography by S.N.Chandrashekhar
Published by V.N. Mallikarjuna Swamy, Registrar, Karnataka Lalithakala Academy, Kannada Bhavana, J.C.Road, Bengaluru-560 002
Ph: 080-22480297

| | | |
|---|---|---|
| First Impression | : | 1987 |
| Second Impression | : | 1992 |
| Thied Edition | : | 2007 |
| Pages | : | viii + 40 + 20 |
| Copies | : | 1000 |
| Price | : | Rs. 50.00 |
| ಹಕ್ಕುಗಳು | : | ಕಾಯ್ದಿರಿಸಿದೆ |
| ಮುದ್ರಣ | : | ೨೦೦೭ |
| ಪುಟಗಳು | : | ೮ + ೪೦ + ೨೦ |
| ಪ್ರತಿಗಳು | : | ೧೦೦೦ |
| ಬೆಲೆ | : | ರೂ. ೫೦.೦೦ |

**ಪ್ರಕಾಶಕರು :**
**ವಿ.ಎನ್. ಮಲ್ಲಿಕಾರ್ಜುನಸ್ವಾಮಿ**
ರಿಜಿಸ್ಟ್ರಾರ್, ಕರ್ನಾಟಕ ಲಲಿತಕಲಾ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ
ಬೆಂಗಳೂರು-೫೬೦ ೦೦೨

**ಮುದ್ರಕರು :**
**ರಶ್ಮಿ ಪ್ರಿಂಟರ್ಸ್**
ನಂ. 12ಬಿ, ಮೊದಲನೇ ಕ್ರಾಸ್
ಕಲಾಸಿಪಾಳ್ಯ, ಹೊಸ ಬಡಾವಣೆ
ಬೆಂಗಳೂರು-560 002
9901916581

# ಅಧ್ಯಕ್ಷರ ನುಡಿ

ಕರ್ನಾಟಕ ಲಲಿತಕಲಾ ಅಕಾಡೆಮಿಯು ಕಳೆದ ನಲವತ್ತುಮೂರು ವರ್ಷಗಳಿಂದ ಲಲಿತ ಕಲೆಗೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಪ್ರಕಟಿಸುತ್ತಾ ಬಂದಿದೆ. ಈ ಎಲ್ಲ ಗ್ರಂಥಗಳೂ ಕರ್ನಾಟಕದ ಕಲಾಸಕ್ತರ ಹಾಗೂ ಕಲಾವಿದರ ಮೆಚ್ಚುಗೆ ಗಳಿಸಿರುತ್ತವೆ. ಈ ಕಲಾ ಸಾಹಿತ್ಯ ಪ್ರಕಟಣೆಯ ಜೊತೆಗೆ ಕರ್ನಾಟಕದ ಚಿತ್ರಕಲಾಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸಿದ ಅನೇಕ ಹಿರಿಯ ಕಲಾವಿದರ ಸಾಧನೆಗಳೊಂದಿಗೆ ಅವರ ಸಮಗ್ರ ಪರಿಚಯವನ್ನು ನೀಡುವ ಕಲಾವಿದರ ಮಾಲೆ ಪುಸ್ತಕಗಳನ್ನೂ ಅಕಾಡೆಮಿಯು ಪ್ರಕಟಿಸುತ್ತ ಬಂದಿದೆ. ಈ ಕಲಾವಿದರ ಮಾಲೆಯು ಆಯಾ ಕಲಾವಿದರ ಕಾಲಘಟ್ಟದಲ್ಲಿ ಬೆಳೆದು ಬಂದ ಕರ್ನಾಟಕದ ಕಲಾ ಇತಿಹಾಸವನ್ನೂ ಪರಿಚಯಿಸುತ್ತದೆ. ಕಲಾವಿದರ ಪರಿಚಯದ ಪುಸ್ತಕವನ್ನು ಕನ್ನಡ ಭಾಷೆಯಲ್ಲಿ ಅಲ್ಲದೇ ಇಂಗ್ಲಿಷ್ ಭಾಷೆಗೂ ಅನುವಾದಿಸಿ ಪ್ರಕಟಿಸಲಾಗುತ್ತದೆ. ಈ ಮೂಲಕ ನಮ್ಮ ಕಲಾವಿದರನ್ನೂ ಅವರ ಸಾಧನೆಯನ್ನೂ ಹೊರ ರಾಜ್ಯದ ಓದುಗರಿಗೆ ಪರಿಚಯಿಸಲಾಗುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರಕಟಿತ 'ವೈ. ಸುಬ್ರಮಣ್ಯ' ಪುಸ್ತಕವು ಅವರ ಜೀವನ ಮತ್ತು ಸಾಧನೆಗಳನ್ನು ಪರಿಚಯಿಸುತ್ತದೆ. ಈ ಪುಸ್ತಕದ ಲೇಖಕರೂ ಸ್ವತಃ ಕಲಾವಿದರಾಗಿದ್ದು ಪ್ರಸ್ತುತ ಕಲಾವಿದ ಜೀವನ, ಸಾಧನೆಗಳನ್ನು ಅರಿತವರಾಗಿದ್ದರಿಂದ ಈ ಕಲಾವಿದರ ಸಮಗ್ರ ಪರಿಚಯದ ಈ ಪುಸ್ತಕವು ಓದುಗರ ಗಮನಕ್ಕೆ ತರುತ್ತದೆ ಎಂದು ಭಾವಿಸಲಾಗಿದೆ.

ಈ ಮೊದಲು ಕಿರು ಅಳತೆಯಲ್ಲಿ ಪ್ರಕಟವಾಗುತ್ತಿದ್ದ ಕಲಾವಿದರ ಪರಿಚಯದ ಪುಸ್ತಕಗಳನ್ನು ಈಗ ದೊಡ್ಡ ಅಳತೆಯಲ್ಲಿ ಸಿದ್ಧಪಡಿಸಿ ಓದುಗರ ಕೈಗಿತ್ತಿದ್ದೇವೆ.

ಎಂದಿನಂತೆ ಕಲಾಸ್ತಕರು, ಕಲಾವಿದರು, ಕಲಾ ಇತಿಹಾಸ ಪ್ರೇಮಿಗಳು ಈ ಪುಸ್ತಕಗಳನ್ನು ಸ್ವಾಗತಿಸುತ್ತಾರೆಂದು ಆಶಿಸಲಾಗಿದೆ.

ಈ ಪುಸ್ತಕವನ್ನು ಮುದ್ರಿಸಿದ **ರಶ್ಮಿ ಪ್ರಿಂಟರ್ಸ್** ಅವರಿಗೂ ಪ್ರಕಟಿಸಿದ ಕರ್ನಾಟಕ ಲಲಿತಕಲಾ ಅಕಾಡೆಮಿಯ ರಿಜಿಸ್ಟ್ರಾರ್ **ಶ್ರೀ ವಿ.ಎನ್. ಮಲ್ಲಿಕಾರ್ಜುನಸ್ವಾಮಿ** ಅವರಿಗೂ ಅಕಾಡೆಮಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಬೆಂಗಳೂರು **ವಿ.ಟಿ. ಕಾಳೆ**

# ಮೊದಲ ಮಾತು (ಮೊದಲ ಮುದ್ರಣಕ್ಕೆ)

ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಮುಖ ಯೋಜನೆಗಳಲ್ಲಿ ರಾಜ್ಯದ ಹಿರಿಯ ಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವುದು ಒಂದು. ಈ ಪುಸ್ತಕಗಳು ಹೆಸರಾಂತ ಕಲಾವಿದರು, ಅವರ ಕಲೆಯ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಕಲೆಯು ಬೆಳೆದು ಬಂದ ದಾರಿ ಮತ್ತು ಅದರ ಚರಿತ್ರೆಯ ತಿಳಿವಳಿಕೆ ಉಂಟುಮಾಡಲು ಸಹಾಯಕವಾಗಲು ಸಾಕು.

ಈ ಯೋಜನೆಯಲ್ಲಿ ಈಗಾಗಲೇ ಹನ್ನೊಂದು ಹೊತ್ತಿಗೆಗಳು ಹೊರಬಂದಿವೆ. ಈಗ, ಅಂದರೆ 1986-87 ಸಾಲಿನಲ್ಲಿ ಈಗಾಗಲೇ ನಾಲ್ಕು ಹೊತ್ತಿಗೆಗಳು ಹೊರಬಂದಿವೆ. ಇನ್ನೂ ಒಂದೆರಡು ತಯಾರಾಗುತ್ತಲೂ ಇವೆ. ಈಗ ಬಿಡುಗಡೆಯಾಗುತ್ತಿರುವ ಪುಸ್ತಕ ಹಿಂದಿನ ಮತ್ತು ಇಂದಿನ ಪೀಳಿಗೆಗೆ ಹಿರಿಯರಾದ ವೈ. ಸುಬ್ರಮಣ್ಯರಾಜುರನ್ನು ಕುರಿತದ್ದು.

ಈ ಪುಸ್ತಕಗಳನ್ನು ರಚಿಸಲು ಆರಿಸಿರುವ ಬರಹಗಾರರು ಕಲೆಯ ವಿಷಯ ಮತ್ತು ಆಯಾ ಕಲಾವಿದರ ಜೀವನದ ಬಗ್ಗೆ ಅರಿತವರು. ಇವುಗಳಿಗೆ ಆರಿಸಿರುವ ಚಿತ್ರಗಳೂ, ಆಯಾ ಕಲಾವಿದರ, ಅವರ ಕಲಾ ವಿಲಾಸದ ಪ್ರತೀಕ. ಅವು ಆಯಾ ಕಲಾವಿದರ, ಅವರ ಕಾಲದ ಕಲಾ ಸಂಪತ್ತಿನ ವ್ಯಾಪ್ತಿಯನ್ನು ಅರಿಯಲು ಸಾಧಕವಾಗುವುದರಲ್ಲಿ ಸಂದೇಹವಿಲ್ಲ.

ಈ ಮಾಲೆಯನ್ನು ತಯಾರಿಸುವಲ್ಲಿ ಸಂಪಾದಕತ್ವ ವಹಿಸಿರುವ ಶ್ರೀ ಎಸ್.ಎನ್. ಚಂದ್ರಶೇಖರ್ ಮತ್ತು ಅವರ ಪ್ರಕಟಣಾ ಸಮಿತಿಯ ಸರ್ವಶ್ರೀ ಎಂ.ಎಸ್. ನಂಜುಂಡರಾವ್, ಪಿ.ಆರ್. ತಿಪ್ಪೇಸ್ವಾಮಿ, ನಾಗಲಿಂಗಾಚಾರ್ಯ ಶಿಲ್ಪಿ, ಜಿ.ವೈ. ಹುಬ್ಳೀಕರ್ ಇವರಿಗೂ ಮತ್ತು ಗ್ರಂಥಕರ್ತರಾದ ಚಂದ್ರಶೇಖರ್ ಅವರಿಗೂ ಅಕಾಡೆಮಿಯ ಪರವಾಗಿ ನನ್ನ ಹೃತ್ಪೂರ್ವಕ ವಂದನೆಗಳು.

ಕಲಾವಿದರು, ಕಲಾರಸಿಕರು ಮತ್ತು ಸಾಹಿತ್ಯಾಭಿಮಾನಿಗಳು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ.

**ಸೋಮಶೇಖರ ಎಂ. ಸಾಲಿ**
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು

# ಎಸ್.ಎನ್. ಚಂದ್ರಶೇಖರ್

ಚಿಕ್ಕಂದಿನಿಂದಲೇ ನಾಟಕ, ಸಂಗೀತ, ನೃತ್ಯ ಮತ್ತು ಲಲಿತಕಲೆಗಳಲ್ಲಿ ಅಭಿರುಚಿಯನ್ನು ಬೆಳೆಸಿಕೊಂಡು ಬಂದಿರುವ ಎಸ್.ಎನ್. ಚಂದ್ರಶೇಖರ್ ಹಿರಿಯ ಪತ್ರಿಕೋದ್ಯಮಿ ಮತ್ತು ನುರಿತ ಬರಹಗಾರರು. ಮೈಸಿಂಡಿಯಾ, ಸಂಯುಕ್ತ ಕರ್ನಾಟಕ, ಡೆಕ್ಕನ್ ಹೆರಾಲ್ಡ್ ಮತ್ತು ಈಗ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಗಳಲ್ಲಿ ಇವರ ಮಹತ್ವದ ವಿಮರ್ಶೆಗಳು ಈಗ್ಗೆ ಸುಮಾರು ನಲವತ್ತು ವರುಷಗಳಿಂದ ಪ್ರಕಟವಾಗುತ್ತ ಬಂದಿವೆ. ಆ ದಿಸೆಯಲ್ಲಿ ಇವರು ಪ್ರಭುತ್ವವನ್ನು ಸಾಧಿಸಿಕೊಂಡಿದ್ದಾರಲ್ಲದೇ, ಅದರಿಂದ ಆಯಾ ಕಲಾವಿದರ, ಕ್ಷೇತ್ರದ ವೈಚಾರಿಕತೆಗೂ ಕಾರಣರಾಗಿದ್ದಾರೆ.

ನಮ್ಮ ಲಲಿತಕಲಾ ಅಕಾಡೆಮಿಯ ಮುಖ ಪತ್ರವಾದ "ಕಲಾವಾರ್ತೆ"ಯ ಸಂಪಾದಕರಾಗಿ ಮತ್ತು ಅದರ ಪ್ರಕಟಣೆಗಳ ಮುಖ್ಯ ಸಂಪಾದಕರಾಗಿ ಇವರು ಸಲ್ಲಿಸಿರುವ ಕಾಣಿಕೆ ಪ್ರಶಂಸನೀಯ. ಈ ದಿಸೆಯಲ್ಲಿ ಹಲವು ಪ್ರಕಟಣೆಗಳು ಪ್ರಕಾಶಗೊಂಡಿದೆಯಲ್ಲದೇ, ಅದರ "ಕರ್ನಾಟಕ ಕಲಾವಿದರು" ಮಾಲೆಯಲ್ಲಿ ಈಗಾಗಲೇ ಹಲವಾರು ಪುಷ್ಪಗಳು ಅರಳಿವೆ. ಅವು ಜನಪ್ರಿಯವಾಗಿಯೂ ಪರಿಣಮಿಸಿವೆ.

ಹಿರಿಯ ಕಲಾವಿದ ವೈ. ಸುಬ್ರಮಣ್ಯರಾಜುರನ್ನು ಕುರಿತು ಈ ಪುಷ್ಪವನ್ನು ಶ್ರೀಯುತರೇ ರಚಿಸಿ, ಪ್ರಕಟಣೆಗೆ ಅಣಿ ಮಾಡಿರುವುದು ಒಂದು ವಿಶೇಷ. ಹೀಗೆ ಇವರಿಂದ ರಚಿತವಾದ ಕೃತಿಗಳಲ್ಲಿ ಇದೇ ಮೊದಲನೆಯದು.

# ವೈ. ಸುಬ್ರಮಣ್ಯರಾಜು

ಅದು ಒಂದು ಕಾಲ. ಆಗ ಧ್ಯೇಯಗಳಿಗೆ ಹೆಚ್ಚು ಬೆಲೆ ಇತ್ತು. ಅದು ಬಹಳ ಹಿಂದಿನದೇನಲ್ಲ, ತೀರ ಇತ್ತೀಚಿನದೂ ಅಲ್ಲ, ಒಂದು ತಲೆಮಾರಿಗೆ ಸ್ವಲ್ಪ ಹಿಂದೆ ಎನ್ನಬಹುದು. ಅಂದರೆ ಈಗ್ಗೆ ನೂರು ವರುಷಗಳ ಒಳಗಿನ ಮಾತು.

ಆಗ ನಮ್ಮ ದೇಶದ ಅನೇಕ ಭಾಗಗಳಲ್ಲಿ ರಾಜ ಮಹಾರಾಜರ ಆಳ್ವಿಕೆ ಜಾರಿಯಲ್ಲಿತ್ತು. ಅವರುಗಳಲ್ಲನೇಕರು ಕಲಾ ಪೋಷಕರು. ನಮ್ಮ ಸಂಸ್ಕೃತಿ, ಪರಂಪರೆಗಳ ಬಗ್ಗೆ ಅವರಿಗೆ ಹೆಮ್ಮೆ. ಅವರಲ್ಲನೇಕರು ಕವಿಗಳನ್ನೂ, ಕಲಾವಿದರನ್ನೂ ಗುರುತಿಸಿ, ಅವರನ್ನು ಆದರಿಸಿ ತಮ್ಮ ಆಸ್ಥಾನದಲ್ಲಿ ಉನ್ನತ ಪದವಿ ಇತ್ತು ಗೌರವಿಸುತ್ತಿದ್ದರು. ಉತ್ತೇಜಿಸುತ್ತಿದ್ದರು. ಆಗ ಹೆಸರಾನ್ವಿತರಾದ ಹಲವು ಕಲಾವಿದರು ಇಂತಹ ಪೋಷಣೆಯಿಂದ, ಸಹಾನುಭೂತಿಯಿಂದ ನಾಡಿನ, ರಾಷ್ಟ್ರದ ಕಲಾ ಸಂಪತ್ತನ್ನು ಬೆಳಗಿಸಿದರು. ಕಲೆಯ ವಿವಿಧ ಪ್ರಕಾರಗಳ ಉನ್ನತಿಗೆ, ಆಯಾ ರಾಜ ಮಹಾರಾಜರ ಕೀರ್ತಿಗೆ ಕಾರಣರಾದರು. ಇಂತಹ ಮಹನೀಯರನ್ನು ನಮ್ಮ ನಾಡು ಈಗಲೂ ಸ್ಮರಿಸುತ್ತಲೇ ಇದೆ. ಆಯಾ ಪ್ರಕಾರಗಳಿಗೆ ಅಂಥವರುಗಳಿಂದಾದ ಕೊಡುಗೆಯನ್ನು ಹಾಡುತ್ತಲಿದೆ. ಹೊಗಳುತ್ತಲಿದೆ. ಅಂತಹ ಮಹಿಮಾನ್ವಿತರನ್ನು ಜನ, ದೇಶ ಮರೆಯಲು ಸಾಧ್ಯವೇ?

ಆ ಕಾಲದಲ್ಲಿ ತಪಸ್ಸಿಗೆ ಉನ್ನತ ಸ್ಥಾನವಿತ್ತು. ಅದು ಯಾವುದೇ ಪ್ರವೃತ್ತಿ ಇರಬಹುದು. ಅದರಲ್ಲಿ ತಪಸ್ಸಿನ ಸಿದ್ಧಿಯನ್ನು ಗುರುತಿಸಬಹುದಿತ್ತು. ಇದು ರಾಜರಿಗೆ ಎಷ್ಟೋ ಕಲಾವಿದರಿಗೂ ಅಷ್ಟೇ ಸಮಂಜಸ. ಎಂತಲೇ ನಮ್ಮ ಪ್ರಾಚೀನ ಪರಂಪರೆಗಳ ಬಗ್ಗೆ ಗೌರವವಿಟ್ಟಿದ್ದ ಜನತೆ ಇವರುಗಳನ್ನು ಗೌರವಿಸುವಂತಾಯಿತು. ಇಂತಹ ಮಹನೀಯರು ಬಿಟ್ಟು ಹೋಗಿರುವ ಸಂಪತ್ತು ಇಂದಿಗೂ ದೇಶ ವಿದೇಶಗಳಲ್ಲಿ ಸ್ಮರಿಸಲ್ಪಡುತ್ತಿದೆ.

ಇಂದಿನ, ಎಂದರೆ ಇಪ್ಪತ್ತನೆಯ ಶತಮಾನದಲ್ಲೂ ಇಂತಹ ಮಹನೀಯರು ಆಗಿಹೋಗಿದ್ದಾರೆ. ಅವರುಗಳನ್ನು ಎಣಿಸುತ್ತಾ ಹೋಗಲು ಹಲವು ಗಂಟೆಗಳೇ ಬೇಕಾಗಬಹುದು. ಅವರುಗಳಲ್ಲಿ ಚಿತ್ರಶಿಲ್ಪ ಕಲೆಗಳಲ್ಲಿ ವೆಂಕಟಪ್ಪ, ಸಂಗೀತದಲ್ಲಿ ವೀಣೆ ಶೇಷಣ್ಣ, ಸುಬ್ಬಣ್ಣ, ಹಾಡುಗಾರಿಕೆಯಲ್ಲಿ ಬಿಡಾರಂ ಕೃಷ್ಣಪ್ಪ, ಪಿಟೀಲಿನಲ್ಲಿ ಚೌಡಯ್ಯ ಮತ್ತು ವಾಗ್ಗೇಯಕಾರರಲ್ಲಿ ವಾಸುದೇವಾಚಾರ್ಯರು, ಮುತ್ತಯ್ಯ ಭಾಗವತರುಗಳ ಹೆಸರುಗಳಂತೂ ಚಿರಸ್ಥಾಯಿ.

ಇವರುಗಳಲ್ಲದೇ ಅದೇ ಮೈಸೂರು ಅರಮನೆಯ ಪೋಷಣೆಯಲ್ಲಿ ಬೆಳಗಿದ ಹಲವು ಕಲಾವಿದರು ಇಂದಿಗೂ ನಮ್ಮ ಮಧ್ಯೆ ಉಳಿದಿರುವುದು ನಾಡಿನ ಮತ್ತು ನಮ್ಮಗಳ ಸೌಭಾಗ್ಯ. ಇವರುಗಳಲ್ಲಿ ಈ ಪುಸ್ತಕಕ್ಕೆ ವಸ್ತುವಾಗಿರುವ ವೈ. ಸುಬ್ರಮಣ್ಯರಾಜು ಎಲ್ಲರಿಗಿಂತ ಹಿರಿಯರು ಮತ್ತು ಅಷ್ಟೇ ಪ್ರತಿಭಾವಂತರು. ಕಳೆದುಹೋದ ಆ ತಲೆಮಾರಿನ ಸಾಧನೆ. ಅವರು ನಮಗೆ ಉಳಿಸಿ ಬೆಳೆಸಿರುವ ಸಂಪತ್ತು ಮತ್ತು ಮಾದರಿಯಾದ ಅಂದಿನ ಸಂಸ್ಕೃತಿಗಳ ಪ್ರತೀಕ ರಾಜುರವರು. ಎಲ್ಲಕ್ಕಿಂತ ಮುಖ್ಯವಾಗಿ ಅವರಲ್ಲಿ ಕಂಡುಬರುವ ಒಂದು ಅಪೂರ್ವ ಗುಣ ಎಂದರೆ ತಮ್ಮ ಎಂಬತ್ತರ ಹರೆಯದಲ್ಲಿಯೂ ಸೂಸುತ್ತಿರುವ ಚಿರಯೌವ್ವನದ ಲವಲವಿಕೆ. ಈ ಲವಲವಿಕೆ ಈ ಎಡೆಬಿಡದ ಚಟುವಟಿಕೆಯೇ ಅವರ ಜೀವನದ ಹಿರಿಮೆ ಎನ್ನಬಹುದು. ಇದು ಅವರ ಜೀವನ ಕ್ರಮದಲ್ಲಿ ಎಷ್ಟು ಖಚಿತವೋ, ಅಷ್ಟೇ ಉತ್ತೇಜನಕಾರಿ ಅವರ ಕೃತಿ ರಚನೆಯಲ್ಲಿ ಮತ್ತು ಅದನ್ನು ಕಲಿಸುವುದರಲ್ಲಿ.

ಸುಬ್ರಮಣ್ಯರಾಜು ಇತ್ತೀಚೆಗೆ, ಒಂದು ಆದೇಶದಂತೆ ತಮಿಳುನಾಡಿನ ತಿರುನಲ್‌ವೇಲಿ ಜಿಲ್ಲೆಯ ತಿರುಪ್ಪಾಡೈ ಮರಡೂರಿನ ದೇವಾಲಯ ಒಂದರ ಭಿತ್ತಿಚಿತ್ರಗಳನ್ನು ನಕಲು ಮಾಡಿರುವ ವೈಖರಿಯಿಂದ ಅವರ ಲವಲವಿಕೆಯ ಅಂಶ ಒಂದನ್ನು ಗಮನಿಸಬಹುದು. ಚೋಳರ ಕಾಲದ ಆ ದೇವಮಂದಿರದಲ್ಲಿ ಹರಡಿರುವ ಚಿತ್ರಣವನ್ನು ಇತ್ತೀಚೆಗೆ ರಾಜು ನಕಲು ಮಾಡಿದ್ದಾರೆ. ಆ ನಕಲುಗಳ ಮಾದರಿ ಆ ಆದೇಶವಿತ್ತವರಿಗೆ ಒಪ್ಪಿಗೆಯಾದಲ್ಲಿ, ಇನ್ನುಳಿದ ಕೆಲವು ಚಿತ್ರಗಳ ಸಾಲನ್ನೂ ಚಿತ್ರಿಸುವ ಉತ್ಸುಕತೆಯಲ್ಲಿದ್ದಾರೆ. ಆ ಶೈಲಿ, ಅಲ್ಲಿನ ವರ್ಣಗಳ ವೈಖರಿ ಮತ್ತು ರೇಖೆಗಳಲ್ಲಿ ಕಂಡು ಬರುವ ಖಚಿತತೆಯನ್ನು ನೋಡಿದವರಾರಿಗೂ ಈ ಮಾದರಿಗಳು ಒಪ್ಪಿಗೆಯಾಗುವುದೆಂಬ ನಂಬಿಕೆಯನ್ನು ಹುಟ್ಟಿಸುವಂತಹವು. ಅಬ್ಬ, ಎಷ್ಟು ಸತ್ವಪೂರ್ಣ ಆ ಚಿತ್ರಣ! ಎಂತಲೇ ಕಾರ್ಲ ಖಂಡೇಲವಾಲರವರಂಥ ನುರಿತ ಕಲಾಚರಿತ್ರೆಯ ಪರಿಣಿತರೂ ಆ ಜವಾಬ್ದಾರಿಯನ್ನು ಇವರಿಗೆ ವಹಿಸಿದ್ದು ಎಂತಹ ನಂಬಿಕೆ ಮತ್ತು ಆ ನಂಬಿಕೆಗೆ ಎಂತಹ ಕಾರ್ಯತತ್ಪರತೆ!

ಆ ಕೃತಿಗಳು ಮುಂದೆ ಪೂರ್ಣಗೊಂಡು, ಖಂಡೇಲವಾಲರ ಮೆಚ್ಚುಗೆಯನ್ನು ಪಡೆದವು. ರಾಜು ಕೃತಕೃತ್ಯರಾದರು.

ಇದರ ನಂತರ, ಎಂದರೆ 1986ರ ನವೆಂಬರ್ ತಿಂಗಳಲ್ಲಿ ಸಾರ್ಕ್ ಶೃಂಗಸಭೆಯ ಸಂದರ್ಭದಲ್ಲಿ ಒಂದು ಅಖಿಲ ಭಾರತ ಕಲಾಶಿಬಿರ ಏರ್ಪಡಿಸಲಾಗಿತ್ತಷ್ಟೇ! ನಗರದ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಆಶ್ರಯದಲ್ಲಿ ಜರುಗಿದ ಆ 10 ದಿನಗಳ ಶಿಬಿರಕ್ಕೆ ರಾಷ್ಟ್ರದ ನಾನಾ ಭಾಗಗಳಿಂದ ಕಲಾವಿದರು, ಶಿಲ್ಪಿಗಳು ಆಹ್ವಾನಿತರಿದ್ದರು. ಅವರಲ್ಲಿ ಅತ್ಯಂತ ಹಿರಿಯರೆಂದರೆ ಅದು ನಮ್ಮ ರಾಜು, ಯಥಾಪ್ರಕಾರ ತಮಗೆ ಸಿದ್ಧಿಸಿರುವ ಮೈಸೂರಿನ ಸಾಂಪ್ರದಾಯಕ ಶೈಲಿಯಲ್ಲಿ ಒಂದು ಸರಸ್ವತಿಯ ಮೂರ್ತಿಯನ್ನು ಬಿಡಿಸಿದರು. ಅದರ ಒಪ್ಪು, ಅಲಂಕಾರ ಮತ್ತು ನಿರೂಪಣೆ ಎಷ್ಟು ಸುಂದರ! ಆ ಮುತುವರ್ಜಿ, ಆ ನಿಶ್ಚಯ ಜ್ಞಾನ ಎಷ್ಟು ಖಚಿತ.

## ಕಾರ್ಯತತ್ಪರತೆ

ಈ ಕಾರ್ಯತತ್ಪರತೆ, ಈ ಶಿಸ್ತಿನಿಂದಲೇ, ಸುಬ್ರಮಣ್ಯರಾಜು ಮೈಸೂರು ಅರಮನೆಯ ಪೋಷಣೆಯಲ್ಲಿ ಬೆಳೆಯುವಂತೆ ಮಾಡಿದ್ದು. ಆಗ ಸುಬ್ಬನಿಗೆ ಕೇವಲ ಹತ್ತು ವರುಷ ವಯಸ್ಸು. ಮಾತೆಯರ ಮತ್ತು ಮಕ್ಕಳ ಕಲ್ಯಾಣ ಕಾರ್ಯಕ್ರಮ ಒಂದಕ್ಕೆ ನಮೂನೆ ಒಂದರ ಸಲುವಾಗಿ ಒಂದು ಅಖಿಲ ಭಾರತ ಸ್ಪರ್ಧೆ ಏರ್ಪಡಿಸಲಾಗಿತ್ತು. ಮಹಾರಾಜರ ಆಪ್ತ ಕಾರ್ಯದರ್ಶಿಯವರಾದ ಸರ್ ಚಾರ್ಲೆಸ್ ಟಾಡ್‌ಹಂಟರ್ ಇದಕ್ಕೆ ಒಂದು ನಮೂನೆಯನ್ನು ತಯಾರಿಸುವಂತೆ ಸುಬ್ರಹ್ಮಣ್ಯನ ತಂದೆ ಎಸ್. ಎಲ್ಲಪ್ಪನವರಿಗೆ ಆದೇಶವಿತ್ತರು. ಆಗತಾನೆ ಚಿತ್ರ ಬಿಡಿಸುವಲ್ಲಿ ಆಸಕ್ತಿ ತೋರಿಸುತ್ತಿದ್ದ ಸುಬ್ರಹ್ಮಣ್ಯನನ್ನು ಕುರಿತು ತಂದೆ "ಮಗು ಇದು ಒಂದು ಸುಸಂದರ್ಭ, ನಮ್ಮ ಅರಮನೆಯಲ್ಲಿ ಇರುವ ಶ್ರೀ ತತ್ವನಿಧಿ ಗ್ರಂಥವನ್ನು ಅವಲೋಕಿಸಿ, ಅದರ ಸಹಾಯದಿಂದ ನೀನೂ ಒಂದು ನಮೂನೆಯನ್ನು ತಯಾರಿಸು" ಎಂದು ಹೇಳಿದರು. ಅದರಂತೆ ಈ ಕಿರಿಯನೂ ಒಂದು ನಮೂನೆಯನ್ನು ತಯಾರಿಸಿದ. ಅದು ಈಗಲೂ ರಾಜೂರವರ ಬಳಿ ಇದೆ.

ಆ ನಮೂನೆ ಅಖಿಲ ಭಾರತ ಮಟ್ಟದಲ್ಲಿ ಮನ್ನಣೆ ಗಳಿಸಿತಲ್ಲದೇ ನಮ್ಮ ಸಂಸ್ಥಾನಕ್ಕೆ ಒಂದು ಫಲಕ (Shieled)ವನ್ನು ಸಂಪಾದಿಸಲೂ ನೆರವಾಯಿತು. ಅಂದಿನಿಂದ ಅರಮನೆಯಲ್ಲಿ ಬೆಳೆದು ಬಂದ ಅವರ ಸಂಪರ್ಕ ನಿರಂತರವಾಗಿ ಕೃಷ್ಣರಾಜ ಒಡೆಯರ ಮತ್ತು ಜಯಚಾಮರಾಜರ ಆಳ್ವಿಕೆಯ ಕಾಲಗಳಲ್ಲಿ ಮುಂದುವರಿದು ತಮ್ಮ ಮತ್ತು ಅರಮನೆಯ ಅಲ್ಲದೇ ಕಲೆಯ ಕೀರ್ತಿ ಬೆಳಗುವಂತೆ ಮಾಡಿತು ಎಂಬುದಕ್ಕೆ ಅವರಿಂದ ರಚಿತವಾಗಿ, ಅರಮನೆಯಲ್ಲಿ ಇಂದಿಗೂ ರಾರಾಜಿಸುತ್ತಿರುವ ಅವರ ವಿಶೇಷ ಚಿತ್ರಣಗಳೇ ಸಾಕ್ಷಿ.

ಈ ಕಲೆಯ ಗೀಳು ಸುಬ್ರಮಣ್ಯರಾಜುರವರ ವಂಶದ ಪರಂಪರೆ. ಸೋಮವಂಶ ಆರ್ಯ ಕ್ಷತ್ರಿಯ ವಂಶಕ್ಕೆ ಸೇರಿದ ಇವರ ಮನೆತನದ ಅಡ್ಡ ಹೆಸರು ರಾಜು ಎಂಬುದು. ತಲೆಮಾರುಗಳಿಂದ ಚಿತ್ರಗಾರರಾಗಿ ಜೀವನ ಸಾಗಿಸಿದ ಇವರ ಹಿರಿಯರು ಕೆಲವರು ಮೈಸೂರಿಗೆ ಬಂದು ನೆಲೆಸಿ ತಮ್ಮ ಪಳಗಿದ ಕೈಯನ್ನು ಚಿತ್ರಕಲೆಗೆ ಮೂಡಿಸಿಕೊಂಡರು. ಇತರರು ಚಿನ್ನ-ಬೆಳ್ಳಿ ಕೆಲಸದಲ್ಲಿ ಮುಂದುವರಿದರು. ಮೈಸೂರು ಅರಮನೆಯಲ್ಲಿ ಮತ್ತು ಮಹಾರಾಜರ ಕೃಪೆಯಿಂದ ಸ್ಥಾಪಿತವಾದ ಚಾಮರಾಜ ವೃತ್ತಿಶಾಲೆಯಲ್ಲಿ ಕೆಲಸ ಮಾಡಿ ಕೀರ್ತಿ ಗಳಿಸಿದ ಕೇಶವಯ್ಯ, ಗೋಪಾಲಯ್ಯ, ಕೊಂಡಯ್ಯ ಮತ್ತು ಪ್ರಖ್ಯಾತ ಕಲಾವಿದ ಕೆ. ವೆಂಕಟಪ್ಪರವರುಗಳೂ ಇದೇ ಪಂಗಡಕ್ಕೆ ಸೇರಿದವರೇ!

ಈ ಹೆಸರಾಂತ ಕಲಾವಿದರೆಲ್ಲ ವಿಜಯನಗರ ಸಂಸ್ಥಾನದ ಸೇವೆಯಲ್ಲಿದ್ದವರ ವಂಶಜರು. ಇವರಂತೆ ನಗುವಿನಹಳ್ಳಿ ನಾರಣಪ್ಪ ಎಂಬ ಹೆಸರಾಂತ ಅರಮನೆಯ ಚಿತ್ರಗಾರರೂ ಅಲ್ಲಿಂದಲೇ ಬಂದವರು. ಇವರಲ್ಲಿ ಸುಬ್ರಹ್ಮಣ್ಯರಾಜುರವರ ಹಿಂದಿನವರು ತುಮಕೂರು ಜಿಲ್ಲೆಯ

ತುರುವೇಕೆರೆಯಲ್ಲಿ ನೆಲೆಸಿದ್ದರು. ದಿವಾನ್ ಪೂರ್ಣಯ್ಯನವರು ಇವರುಗಳ ಕಲಾನೈಪುಣ್ಯವನ್ನು ಗುರುತಿಸಿ ಶ್ರೀರಂಗಪಟ್ಟಣಕ್ಕೆ ಬರಮಾಡಿಕೊಂಡು ರಾಜಸ್ಥಾನದಲ್ಲಿ ಭಿತ್ತಿಚಿತ್ರಗಳನ್ನು ಬಿಡಿಸುವ ಕಾರ್ಯವನ್ನು ಇವರಿಗೆ ವಹಿಸಿದ್ದರು. ಅಂದರೆ ಮೂರು ತಲೆಮಾರುಗಳಿಂದ ಸುಬ್ರಮಣ್ಯರಾಜುರವರ ವಂಶಜರು ಮೈಸೂರು ಅರಸರ ಪೋಷಣೆಯಲ್ಲಿ ಬೆಳೆದರು. ಕಾರಣಾಂತರದಿಂದ ಸುಬ್ರಮಣ್ಯರಾಜುರೇ ಆ ಸರಣಿಯಲ್ಲಿ ಕೊನೆಯವರೂ ಆಗಿದ್ದಾರೆ. ಅಂತೂ ಶ್ರೀರಂಗಪಟ್ಟಣದಲ್ಲಿ ನೋಡುಗರನ್ನೂ ದರಿಯಾ ದೌಲತ್ ಅರಮನೆಯಲ್ಲಿ ಇಂದಿಗೂ ಸೆರೆ ಹಿಡಿಯುತ್ತಿರುವ ಭಿತ್ತಿಚಿತ್ರಗಳು ಇವರ ವಂಶಜರಿಂದ ಚಿತ್ರಿಸಲ್ಪಟ್ಟಿತು ಎಂಬುದಂತೂ ನಿರ್ವಿವಾದ.

ಆದರೆ ಸುಬ್ರಮಣ್ಯರಾಜು ಕಲಾವಿದನಾಗುವಂತೆ ಮಾಡಿದ ಪ್ರಸಂಗ ಕುತೂಹಲಕಾರಿ. ರಾಜುರವರ ಅಣ್ಣ ನಾಗರಾಜು ಇವರಿಗಿಂತ ಎರಡು ವರುಷ ಹಿರಿಯರು. ಇವರು ಮೊದಲಿನಿಂದ ಮೂರ್ತಿ ಚಿತ್ರಣದಲ್ಲಿ ಆಸಕ್ತಿಗೊಂಡು ಆ ಶೈಲಿಯಲ್ಲಿ ಪಳಗಿದ ಕೈ. ಇವರುಗಳ ತಾರುಣ್ಯದಲ್ಲಿ ನಾಗರಾಜುರವರ ಒಂದು ಚಿತ್ರ ಫಲಕ ಬಹುಮಾನ ಗಳಿಸಿತು. ಇದನ್ನು ನೋಡಿದ ಬಾಲಕ ಸುಬ್ಬ (ಅವರ ತಾಯಿ ಸಂಬೋಧಿಸುತ್ತಿದ್ದ ರೀತಿ) ತಾನೂ ಅವನಂತೆ ಏಕಾಗಬಾರದೆಂದು ಚಿತ್ರ ರಚಿಸುವ ಸಾಹಸಕ್ಕೆ ಕೈಹಾಕಿದರು. ಅದರ ಪರಿಣಾಮವೇ ಹಿಂದೆ ವಿವರಿಸಿದ ರಾಷ್ಟ್ರೀಯ ಬಹುಮಾನದ ಪ್ರಸಂಗ. ಅಂದಿನಿಂದ ಸುಬ್ರಮಣ್ಯರಾಜು ಗಳಿಸಿರುವ ಬಹುಮಾನಗಳ ಸಂಖ್ಯೆ ಅಪಾರ. ಅದರಂತೆ ಅವರ ಕೀರ್ತಿಯೂ ಸೀಮಾತೀತ.

ರಾಜು ಜನಿಸಿದ್ದು 1907ರ ಡಿಸೆಂಬರ್ ಮೂರರಂದು. ಆಗ ಇವರ ತಂದೆಯವರ ಸಂಸಾರ ಮೈಸೂರಿನಲ್ಲಿ ನೆಲೆಸಿತ್ತು. ತಾತ ಸುಂದರಯ್ಯ ಅರಮನೆಯ ಕಲಾವಿದ. ಮೂರ್ತಿಶಿಲ್ಪಗಳನ್ನು ತಯಾರಿಸುವುದರಲ್ಲಿ ಎತ್ತಿದ ಕೈ. ಅಂತೆಯೇ ತಾಯಿ ಕೃಷ್ಣಮ್ಮನವರೂ ಸಹ ಮೂರ್ತಿಗಳನ್ನು ತಯಾರಿಸುವುದರಲ್ಲಿ ನಿಷ್ಣಾತೆ. ಹಬ್ಬಹರಿದಿನಗಳಲ್ಲಿ ಇವರಿಂದ ತಯಾರಾದ ಮಣ್ಣಿನ ದೇವತಾಮೂರ್ತಿಗಳಿಗೆ ಎಡಬಿಡದ ಬೇಡಿಕೆ, ಮೊದಲೇ ಹೇಳಿ ಮಾಡಿಸಿಕೊಂಡ ಪ್ರಸಂಗಗಳಿಗೂ ಕೊರತೆ ಇರಲಿಲ್ಲ. ಇದು ಇವರ ವಂಶದಲ್ಲಿ ಬೆಳೆದು ಬಂದ ವೃತ್ತಿ. ಅದು ಈಗ ಕ್ಷೀಣಿಸಿದರೂ ಅವರ ಕೀರ್ತಿ ನಶಿಸಿಲ್ಲ.

ಅಂದಿನ ಸುಧಾರಿತ ಜನಾಂಗದವರಿಗನುಗುಣವಾಗಿ, ಬಾಲಕ ಸುಬ್ಬ ತನ್ನ ವಿದ್ಯಾಭ್ಯಾಸವನ್ನು "ರಾಜಾ ಸ್ಕೂಲ್" ಎಂಬ ಆಂಗ್ಲ-ಕನ್ನಡ ಭಾಷಾ ಶಾಲೆಯಲ್ಲಿ ಆರಂಭಿಸಿದರು. ಆ ಶಾಲೆ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಸ್ಥಾಪಿತವಾಗಿ ಮುಂದೆ ವಿಧವಿಧವಾಗಿ ಪರಿವರ್ತನೆಗೊಂಡು ಕೊನೆಗೆ ರಾಜಾ ಶಾಲೆ ಎಂದೇ ಕರೆಯಲ್ಪಟ್ಟಿತು. ಆದರೆ ಬಾಲಕ ಸುಬ್ಬನಿಗೆ ಇದ್ದ ಒಲವೆಲ್ಲಾ ಚಿತ್ರ ಬಿಡಿಸುವುದರತ್ತ. ಇದಕ್ಕೆ ಕಾರಣವೂ ಇತ್ತು.

## ಎಲ್ಲ ಕಲಾವಿದರೇ

ಇವರ ತಾತನವರಂತೆ ತಂದೆ ಎಲ್ಲಪ್ಪನವರೂ ಕಲಾವಿದರೇ. ಆದರೆ ಇವರಿಗೆ ವಿದ್ಯಾಭ್ಯಾಸದಲ್ಲಿ ಹೆಚ್ಚು ಆಸಕ್ತಿ. ಇವರೂ ಅರಮನೆಯ ನೌಕರಿಯಲ್ಲಿಯೇ ಇದ್ದರು. ಅದು ನಕ್ಷೆಗಾರ (Draughts man) ಆಗಿ. ಕಲಾವಿದನಾಗಿ ಅಲ್ಲ. ಇವರ ಚಿಕ್ಕಪ್ಪ ಶಂಕರಯ್ಯನೂ ಕಲಾವಿದರಾದರೂ ಅವರು ಆಭರಣಗಳ, ಜಿನ್ಸೋದ ನಮೂನೆಗಳನ್ನು ತಯಾರಿಸುವುದರಲ್ಲಿ ಹೆಸರು ಗಳಿಸಿದ್ದರು.

ಆ ಸಮಯದಲ್ಲಿ ಕೇಶವಯ್ಯನವರು ಮೈಸೂರು ಸಂಪ್ರದಾಯ ಶೈಲಿಯ ಕಾರ್ಯಾಗಾರ ಒಂದನ್ನು ನಡೆಸುತ್ತಿದ್ದರು. ಆ ಕಾರ್ಯಾಗಾರದಲ್ಲಿ ರಾಜುರವರ ಅಣ್ಣ ನಾಗರಾಜು, ರಾಮಸ್ವಾಮಿನಾಯ್ಡು ಮತ್ತು ರಾಜಗೋಪಾಲ ಅಯ್ಯಂಗಾರರಂಥ ಹಿರಿಯರು ಕಲಿಯುತ್ತಿದ್ದರು. ಇತ್ತ ಮನೆಯಲ್ಲಿ ಅದೇ ವಾತಾವರಣ ಹರಡಿತ್ತು. ತಾತ ಸುಂದರಯ್ಯ ಕೋದಂಡರಾಮ, ಗಜೇಂದ್ರಮೋಕ್ಷ ಮುಂತಾದ ಸಂಯೋಜನೆಗಳಿಗೆ ಒಂದು ನಾವೀನ್ಯತೆಯನ್ನು ಕೊಡಲು ಪ್ರಯೋಗಗಳನ್ನು ನಡೆಸುತ್ತಿದ್ದರು. ಸುಬ್ರಮಣ್ಯರಾಜುರವರಿಗೆ ಆಗ 14 ವರ್ಷ. ಅವರು ಈ ಪ್ರಯೋಗಗಳನ್ನು ಕುತೂಹಲದಿಂದ ಗಮನಿಸುತ್ತಿದ್ದರು ಮತ್ತು ಅದರಂತೆ ತಾವೂ ಚಿತ್ರ ಬಿಡಿಸಲು ತೊಡಗಿದ್ದರು.

ಹೀಗೆ ಇವರು ನಿರ್ಮಿಸಿದ ಮೊದಲ ಚಿತ್ರ ಸರಸ್ವತಿಯದು. ಮುಗಿಸಿದ ಕೆಲವೇ ದಿನಗಳಲ್ಲಿ ಒಬ್ಬ ಐರೋಪ್ಯ ಪ್ರವಾಸಿ ಅದನ್ನು ರೂ. 40ಕ್ಕೆ ಕೊಂಡ. ಆತ ಬಾಲಕ ಸುಬ್ಬನನ್ನು ಆ ಚಿತ್ರಣ ಹೇಗೆ ರೂಪುಗೊಂಡಿತು ಎಂದು ವಿಚಾರಿಸಿದ. ಅದಕ್ಕೆ ರಾಜು ಸರಸ್ವತಿಯ ಧ್ಯಾನ ಶ್ಲೋಕ "ಯಾಕುಂದೇಂದು"ವನ್ನು ಉಚ್ಚರಿಸಿ, ಆ ಶ್ಲೋಕ ಹೇಗೆ ಸರಸ್ವತಿಯ ರೂಪುರೇಷೆಯನ್ನು ವಿವರಿಸಿದೆ ಎಂಬುದನ್ನು ತಿಳಿಸಿದ. ಅದು ಆ ಯುರೋಪಿಯನಿಗೆ ಪ್ರಿಯವಾಯಿತು. ಚಿತ್ರದ ಉತ್ಪತ್ತಿಯಿಂದ ಬಾಲಕ ಸುಬ್ಬನಿಗೂ ಸಂತಸವಾಯಿತು.

ಆ ಹೊತ್ತಿಗೆ ಸುಬ್ರಮಣ್ಯರಾಜು ಎಲ್.ಎಸ್. ಪರೀಕ್ಷೆ ಮುಗಿಸಿ ಶಾಲೆಗೆ ಶರಣು ಹೊಡೆದಿದ್ದರು. ಆಗತಾನೆ ಪ್ರಾರಂಭವಾದ ಶ್ರೀ ಚಾಮರಾಜ ವೃತ್ತಿ ಶಿಕ್ಷಣ ಶಾಲೆಯನ್ನು ಸೇರಿದ್ದರು. ಇವರ ಹತ್ತಿರದ ಸಂಬಂಧಿ ಕೇಶವಯ್ಯ ಆ ಶಾಲೆಯಲ್ಲಿ ಶಿಕ್ಷಕ. ರಾಜು ಮೊದಲಿಗೆ ಅರ್ಧ ಸಮಯದ ವಿದ್ಯಾರ್ಥಿಯಾಗಿ (ಸಂಪ್ರದಾಯ ಕಲಾವಿದ ಪರಂಪರೆಯವರಿಗೆ ಈ ಸೌಕರ್ಯವಿತ್ತು) ನಂತರ ಪೂರ್ಣವಿದ್ಯಾರ್ಥಿಯಾಗಿ ಮುಂದುವರೆದರು. ಆಗ ಶಾಲೆಯ ಮುಖ್ಯಸ್ಥ ಹೆರಾಲ್ಡ್ ಆಲ್ಡರ್‌ಟನ್ ಎಂಬ ಆಂಗ್ಲ ಶಿಕ್ಷಕ. ರಾಜು ಮೊದಲ ಐದು ವರ್ಷದ ವ್ಯಾಸಂಗದಲ್ಲಿ ದಿಗ್ದರ್ಶನ, ಪ್ರಮಾಣ, ದೇಹರಚನೆ, ಸಮತೆ ಮುಂತಾದ ಕಲೆಯ ಮೂಲಭೂತ ಗುಣಗಳನ್ನು ಅಭ್ಯಾಸ ಮಾಡಿದರು. ಅವರ ವ್ಯಾಸಂಗ ಮಾತ್ರ ಕೇವಲ ಐದು ವರುಷಗಳಿಗೆ ಸೀಮಿತವಾಗದೆ ಹತ್ತು ವರುಷಗಳವರೆಗೂ ನಡೆದಿತ್ತು.

ರಾಜುರವರೇ ವಿವರಿಸುವಂತೆ ಕಲಾ ಶಾಲೆಯಲ್ಲಿ ಆಗ ಪ್ರಚಾರವಿದ್ದ ಶೈಲಿ ಎಂದರೆ ಅದು

ನೈಜ ಚಿತ್ರಣ ಎಂದರೆ ಕಂಡದ್ದನ್ನು ಕಂಡಂತೆ ಪ್ರತಿಬಿಂಬಿಸುವುದು. ಇಲ್ಲಿ ತ್ರಿಕೋಣ ಆಯಾಮಕ್ಕೆ ಆದ್ಯ ಸ್ಥಾನ. ಆದ್ದರಿಂದ ರೇಖೆಗಳ ಸಾಂದ್ರತೆ ಮತ್ತು ವರ್ಣಗಳ ಛಾಯೆಗಳತ್ತ ಗಮನವೂ ಅಷ್ಟೇ ಅಗತ್ಯ. ಚಪ್ಪಟೆಯಾಗಿ ಬಣ್ಣ ಬಳಿಯುವಿಕೆ ಇಲ್ಲಿ ವರ್ಜ್ಯ. ಸೌಂದರ್ಯಪ್ರಜ್ಞೆಯೇ ಮುಖ್ಯವಲ್ಲದಿದ್ದರೂ, ಈ ಶೈಲಿಯಲ್ಲಿ ಮೂಡಿಬರುವ ಚಿತ್ರಣ ಎಂಥವರ ಮನಸ್ಸಿಗೂ ಹಿತಕೊಡುವಂತಹುದು. ಇದರಿಂದಲೇ ಮಿಕ್ಕೆಲ್ಲಾ ಶೈಲಿಗಳೂ ಉದ್ಭವಿಸಿವೆ ಎಂದರೂ ತಪ್ಪಾಗಲಾರದು.

ಮದರಾಸಿನ ಸರ್ಕಾರಿ ಕಲಾಶಾಲೆ ಮತ್ತು ಮುಂಬಯಿನ ಜೆ.ಜೆ. ಸ್ಕೂಲುಗಳೂ ಇದೇ ಮಾರ್ಗವನ್ನು ಅನುಸರಿಸುತ್ತಿದ್ದವು. ಆದ್ದರಿಂದಲೇ ನಮ್ಮ ರಾಜ್ಯದ ಅನೇಕ ಕಲಾವಿದರು ಅಲ್ಲಿಗೆ ಹೋಗಿ ತಮ್ಮ ಕಲಾ ವ್ಯಾಸಂಗವನ್ನು ಮುಂದುವರಿಸಲು ಸಾಧ್ಯವಾದದ್ದೂ ಸಹ.

ಅದೇ ಸಮಯದಲ್ಲಿ ಅಣ್ಣ ನಾಗರಾಜು ಅರಮನೆಯಲ್ಲಿ ಕೆಲಸಕ್ಕೆ ಸೇರಿದ್ದರು. ಅವರು ವ್ಯಕ್ತಿ ಚಿತ್ರಣದಲ್ಲಿ ಹೆಸರು ಪಡೆದ ಕಲಾವಿದ. ಅದೇ ಅರಮನೆಯಲ್ಲಿಯೂ ಅವರ ಜವಾಬ್ದಾರಿ. ಕೇಶವಯ್ಯನವರೂ ಅರಮನೆಯ ಕೆಲಸಗಳಲ್ಲಿ ತೊಡಗಿದ್ದರಿಂದ, ಈ ಇಬ್ಬರೂ ಹಿರಿಯ ಕಲಾವಿದರ ಚಿತ್ರಣ ವಿಧಾನ, ಮಾಧ್ಯಮದ ಬಳಕೆ, ಇವುಗಳನ್ನು ಕಿರಿಯ ಸುಬ್ಬ ಗಮನಿಸುತ್ತಿದ್ದರು.

ಶಾಲೆಯಲ್ಲಿ ಕಲಿಕೆ ಮತ್ತು ಹಿರಿಯರ ಮೇಲ್ಪಂಕ್ತಿಗಳ ಪ್ರಭಾವದಿಂದ ಸುಬ್ಬನ ಒಲವು ಕಲೆಯತ್ತ ವಾಲಿದುದರಲ್ಲಿ ಆಶ್ಚರ್ಯವಿಲ್ಲ! ಸರಿ, ಪ್ರತಿದಿನ ಪ್ರಾತಃಕಾಲ ವಾಯುವಿಹಾರಕ್ಕೆ ಹೋಗುವಾಗಲೆಲ್ಲಾ ತಮ್ಮ ಸ್ಕೆಚ್ ಪುಸ್ತಕ ಮತ್ತು ಪೆನ್ಸಿಲ್‌ಗಳನ್ನು ತಮ್ಮೊಡನೆಯೇ ತೆಗೆದುಕೊಂಡು ಹೋಗಲು ಪ್ರಾರಂಭ. ಸಮಯ ಸಿಕ್ಕಾಗಲೆಲ್ಲಾ ಪ್ರಕೃತಿಯ ಇಲ್ಲವೇ ಕಂಡ ವ್ಯಕ್ತಿಗಳನ್ನು ಚಿತ್ರಿಸಲು ಉಪಕ್ರಮ.

ಆಗ ಅರಮನೆಯಲ್ಲಿ ಕೆಲಸ ಮಾಡುತ್ತಿದ್ದ ಇತರ ಕಲಾವಿದರಲ್ಲಿ ಸುಬ್ರಮಣ್ಯರಾಜುರವರನ್ನು ಆಕರ್ಷಿಸಿದವರೆಂದರೆ ಅಬ್ದುಲ್ ಅಜೀಜ್. ಇವರ ಚಿತ್ರ ಈಗಲೂ ಜಗನ್ಮೋಹನ ಅರಮನೆಯಲ್ಲಿ ವಿರಾಜಿಸುತ್ತಿದೆ. ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿರುವ ನಾಲ್ವಡಿ ಕೃಷ್ಣರಾಜರ ಭಾವಚಿತ್ರವೂ ಇವರಿಂದಲೇ ರಚಿತವಾದದ್ದು. ರಾಜುರವರ ತಂದೆ ಎಲ್ಲಪ್ಪನವರಿಗೆ ಅತಿ ಮೆಚ್ಚುಗೆಯಾದ ರಾಜಾ ರವಿವರ್ಮರ ಚಿತ್ರಣಕ್ಕೆ ಸಮತೋಲನವಾದ ಅಜೀಜ್‌ರ ಚಿತ್ರಣ ರಾಜುಗೆ ಅಚ್ಚುಮೆಚ್ಚು. ಆ ಚಿತ್ರ ವಿಶೇಷಗಳನ್ನು ಕೆ. ವೆಂಕಟಪ್ಪನವರ ಶೈಲಿಯಲ್ಲಿಯೂ ಕಂಡದ್ದರಿಂದಲೇ, ಅವರಿಂದ ಪಾಠ ಕಲಿಯಬೇಕೆಂಬ ಅಪೇಕ್ಷೆ ಉಂಟಾದದ್ದೂ ಸಹ. ಆದರೆ ಅವರನ್ನು ಬೇಡಿದಾಗ ರಾಜುರವರ ಪಂಗಡಕ್ಕೆ ಸೇರಿದ ವೆಂಕಟಪ್ಪ ಎಲ್ಲರಿಗೂ ತಿಳಿದಂತೆ ಖಡಾಖಂಡಿತವಾಗಿ ನಿರಾಕರಿಸಿದರಂತೆ. ಅವರಿತ್ತ ಕಾರಣ ಇಷ್ಟೇ, "ನೋಡಪ್ಪ, ನಾನು ಬಹಳ ಪ್ರಯಾಸಪಟ್ಟು ಒಂದಂತಸ್ತನ್ನು ತಲುಪಿದ್ದೇನೆ. ಈಗ ನಿನಗೆ ಕಲಿಸಬೇಕೆಂದರೆ ಆ ಅಂತಸ್ತಿನಿಂದ ಬಹಳ ಕೆಳಗಿಳಿಯಬೇಕಾಗಬಹುದು, ಅದಕ್ಕೆ ನಾನು ಸಿದ್ಧನಿಲ್ಲ". ಪ್ರಾಯಶಃ ಇದೇ ಕಾರಣದಿಂದ ಶ್ರೀಯುತರು ಯಾರನ್ನೂ ಶಿಷ್ಯರನ್ನಾಗಿ

ಸ್ವೀಕರಿಸಲಿಲ್ಲ. ಅವರಿಂದ ಸಲಹೆ, ಸ್ಫೂರ್ತಿ ಪಡೆದವರಿದ್ದರೂ, ಅವರಲ್ಲಿ ಶಿಷ್ಯವೃತ್ತಿ ಪಡೆದವರು ಯಾರೂ ಇಲ್ಲವೆಂದೇ ಹೇಳಬೇಕು.

ಆದರೆ ಕಲಾ ಶಾಲೆಯಲ್ಲಿ ರಾಜುರವರಿಗೆ ಉತ್ತಮ ಮಾರ್ಗದರ್ಶನಕ್ಕೆ ಕಡಿಮೆ ಇರಲಿಲ್ಲ. ಕೇಶವಯ್ಯನವರ ಮೇಲ್ವಿಚಾರಣೆಯಲ್ಲಿ ಟಂಕಸಾಲೆಯವರಿಂದ ನಿಸರ್ಗ ಚಿತ್ರಣ ಮತ್ತು ಯಲವಟ್ಟಿಯವರಿಂದ ರೇಖಾ ಚಿತ್ರಣವನ್ನು ಕಲಿತರು. ತಮ್ಮ ಆಸಕ್ತಿ ಮತ್ತು ಕಾರ್ಯತತ್ಪರತೆಯಿಂದ ಆ ಹಿರಿಯ ಕಲಾ ಶಿಕ್ಷಕರ ಮನವೊಲಿಸಿಕೊಂಡರು ಮತ್ತು ಅಲ್ಲಿನ ವಿದ್ಯಾಭ್ಯಾಸವನ್ನು ಸಾಂಗವಾಗಿ ಪೂರೈಸಿದರು.

## ದೀಪದ ಹೊದಿಕೆ!

ರಾಜುರವರು ಈ ಕಲಾ ಶಾಲೆಯನ್ನು ಸೇರುವಂತಾದುದೂ ಒಂದು ಸ್ವಾರಸ್ಯಪೂರ್ಣ ಕಥೆಯೇ. ಇವರು ಅರಮನೆಯಲ್ಲಿ ಬೆಳೆಸಿಕೊಂಡ ಸಲಿಗೆಯಿಂದ ಕ್ರಿಸ್‌ಮಸ್ ಹಬ್ಬದ ಸಂದರ್ಭದಲ್ಲಿ ಟಾಡ್ ಹಂಟರ್‌ರವರು ಮಹಾರಾಜರಿಗೆ ಹಬ್ಬದ ಕಾಣಿಕೆಯಾಗಿ ಕೊಡುವುದಕ್ಕೆ ಒಂದು ದೀಪದ ಮೇಲುಹೊದಿಕೆಯ ನಮೂನೆಯನ್ನು ತಯಾರಿಸಲು ಆದೇಶವಿತ್ತರು. ಮೇಲುಹೊದಿಕೆಗೆ ದಸರಾ ಮೆರವಣಿಗೆಯ ಚಿತ್ರಣವನ್ನು ಬಳಸಲು ಸಲಹೆಯಿತ್ತರು. ಈ ಕಾರ್ಯವನ್ನು ರಾಜು ಬಹಳ ಮುತುವರ್ಜಿಯಿಂದ ನಿರ್ವಹಿಸಿದರು. ಆ ನಮೂನೆ ಟಾಡ್‌ಹಂಟರ್‌ರವರಿಗೆ ತೃಪ್ತಿ ತಂದಿತು. ಅದಕ್ಕಿಂತ ಹೆಚ್ಚಾಗಿ ಆ ಚಿತ್ರಣವನ್ನು ಮಹಾರಾಜರಿಗೆ ಒಪ್ಪಿಸಿದಾಗ, ಅದು ಅವರಿಗೂ ಮೆಚ್ಚುಗೆಯಾಗಿ ಅದನ್ನು ತಯಾರಿಸಿದ ಕಲಾವಿದನನ್ನು ಪರಿಚಯ ಮಾಡಿಕೊಳ್ಳಲು ಆಸಕ್ತಿ ತೋರಿದರು. ಅದರಂತೆ ಸುಬ್ರಮಣ್ಯರಾಜುರವರನ್ನು ಮಹಾರಾಜರಿಗೆ ಪರಿಚಯ ಮಾಡಿಕೊಡಲಾಯಿತು.

ಕಲೆಯಲ್ಲಿ ಅಭಿರುಚಿ ಬೆಳೆಸಿಕೊಂಡು, ಅದರ ಆಗುಹೋಗುಗಳನ್ನು ತಿಳಿದ ಮಹಾರಾಜರಿಗೆ ಈ ತರುಣ ಕಲಾವಿದನನ್ನು ಕಂಡು ಬಹಳ ಸಂತೋಷವಾಯಿತು. ಕಿರಿಯ ವಯಸ್ಸಿನಲ್ಲಿಯೇ ಇಷ್ಟೊಂದು ಪ್ರತಿಭೆಯನ್ನು ತೋರಿಸಿದ ತರುಣನ ಶ್ರದ್ಧೆಯನ್ನು ಕೊಂಡಾಡಿ, ಸಾಂಗವಾಗಿ ಕಲಾ ವ್ಯಾಸಂಗ ಅವನಿಗೆ ದೊರಕುವಂತೆ ಮಾಡಿದ್ದೂ ಅವರೇ. ಅವರ ಆದೇಶದಂತೆಯೇ ರಾಜು ಕಲಾ ಶಾಲೆಯನ್ನು ಸೇರಿದ್ದು ಆಗ ಅವರಿಗೆ ಮಹಾರಾಜರು ಒಂದು ವಿದ್ಯಾರ್ಥಿವೇತನವನ್ನೂ ದಯಪಾಲಿಸಿದರು. ಅದರ ಮೊತ್ತ ತಿಂಗಳಿಗೆ ನಾಲ್ಕು ರೂಪಾಯಿಗಳು! ಮುಂದೆ ಅದನ್ನು ಆರು ರೂಪಾಯಿಗಳಿಗೆ ಏರಿಸಲಾಯಿತಂತೆ.

ಹೀಗೆ ಅರಮನೆಯ ಬಳಗಕ್ಕೆ ಸೇರುವಂತೆ ಮಾಡಿದ ದೀಪದ ಹೊದಿಕೆಯ ನಮೂನೆಯಿಂದ ಉತ್ತೇಜಿತರಾದ ರಾಜು, ಚಾಮರಾಜೇಂದ್ರ ತಾಂತ್ರಿಕ ಕಲಾ ಶಾಲೆಯನ್ನು ಸೇರಿ ಅಲ್ಲಿನ ಖ್ಯಾತ ಉಪಾಧ್ಯಾಯರಾದ ಕೇಶವಯ್ಯ ಮತ್ತು ವೇಣುಗೋಪಾಲನಾಯ್ಡುರವರಿಂದ ಸಾಂಗವಾಗಿ ಒಂದೊಂದಾಗಿ ರೇಖಾಚಿತ್ರಣ, ವರ್ಣಚಿತ್ರಣ, ನಮೂನೆ (Design)ಗಳ ತಯಾರಿಕೆ ಮತ್ತು

ಜಾಮಿತಿಯ ಪ್ರಕಾರಗಳಲ್ಲಿ ಎಲ್ಲ ವರ್ಗಗಳ ಪರೀಕ್ಷೆಗಳಲ್ಲೂ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗಿ ಡಿಪ್ಲೊಮಾ ಗಿಟ್ಟಿಸಿದರು. ಈ ಎಲ್ಲ ಯಶಸ್ಸುಗಳಲ್ಲದೇ ಮದರಾಸಿನ ತಾಂತ್ರಿಕ ಪರೀಕ್ಷೆಯಲ್ಲಿಯೂ ತೇರ್ಗಡೆಯಾಗಿ ಡಿಪ್ಲೊಮಾ ಗಿಟ್ಟಿಸಿದರು. ಇದರಲ್ಲಿ ನಮೂನೆಗಳನ್ನು ತಯಾರಿಸುವುದರಲ್ಲಿ ರಾಜುರವರಿಗೆ ಪ್ರಥಮ ದರ್ಜೆ ದೊರೆತದ್ದನ್ನೂ ಮರೆಯಬಾರದು. ಎಷ್ಟಿದ್ದರೂ ಅವರ ವಂಶಜರ ಬುನಾದಿ ಸಾಂಪ್ರದಾಯಿಕ ಕಲೆಯ ಆಯಾಮವೇ ಅಲ್ಲವೇ?

ಆ ಸುಮಾರಿನಲ್ಲಿ ರಾಜು ಪ್ರತಿದಿನ ಮರಿಮಲ್ಲಪ್ಪ ಸ್ಕೂಲಿನ ಆವರಣದಲ್ಲಿ ಸ್ಥಾಪಿಸಲಾದ ಫಕೀರ್‌ಸಾಬರ ಗರಡಿಮನೆಯಲ್ಲಿಸಾಮು ಕಲಿಯುತ್ತಿದ್ದರು. ಈ ಸಂಬಂಧದಿಂದ ಮತ್ತು ಅವರಿಗೆ ಡಿಪ್ಲೊಮಾ ದೊರಕಿದ ಸುಸಂದರ್ಭದಲ್ಲಿ ಅದೇ ಸ್ಕೂಲಿನಲ್ಲಿ ಡ್ರಾಯಿಂಗ್ ಉಪಾಧ್ಯಾಯನ ಹುದ್ದೆಗೆ ಆಹ್ವಾನವು ಬಂದಿತು. ಆದರೆ, ಅದಕ್ಕೆ ಇವರು ಒಪ್ಪಲಿಲ್ಲ, ಒಪ್ಪಿದ್ದರೆ ಇವರ ಕಥೆಯೇ ಬೇರೆಯಾಗುತ್ತಿತ್ತೋ ಏನೋ! ಇದು ನಡೆದದ್ದು 1926ರ ಸುಮಾರಿನಲ್ಲಿ, ಅದೇ ಸುಮಾರಿಗೆ ಮೈಸೂರಿನ ಪರಕಾಲಮಠದ ಸ್ವಾಮಿಗಳಿಂದ 5 x 9 ಆಕಾರದಲ್ಲಿ ವೇದಾಂತ ದೇಶಿಕರ ವ್ಯಕ್ತಿ ಚಿತ್ರವನ್ನು ತಯಾರಿಸಲು ಆದೇಶ ಬಂದಿತ್ತು. ಅದು ಒಂದು ಶುಭ ಘಳಿಗೆ ಎಂಬುದೇ ಈಗಲೂ ರಾಜುರವರ ಅಭಿಮತ. ಏಕೆಂದರೆ ಅದು ಬಂದ ಘಳಿಗೆಯಲ್ಲೇ ಚಾಮರಾಜ ತಾಂತ್ರಿಕ ಶಾಲೆಯ ಉದ್ಯೋಗ ಪತ್ರವೂ ಅವರ ಕೈಸೇರಿದ್ದು, ಅಲ್ಲದೇ ಆ ಚಿತ್ರಣ ಮುಗಿದಾಗಲೇ ಆ ಹುದ್ದೆಯ ಸೃಷ್ಟಿ ಕಾರಣವಾದದ್ದೂ! ಆ ಚಿತ್ರಣ ಎಲ್ಲರ ಮೆಚ್ಚುಗೆಗೆ ಪಾತ್ರವಾದುದಲ್ಲದೇ ರಾಜುರವರಿಗೂ ತೃಪ್ತಿ ಕೊಟ್ಟಿತು. ಅದರಿಂದ ಅವರು ಒಬ್ಬ ನುರಿತ ಕಲಾವಿದನಾದೆ ಎಂಬ ಆತ್ಮವಿಶ್ವಾಸವೂ ತಮ್ಮಲ್ಲಿ ಉಂಟಾಯಿತು ಎಂದು ಈಗಲೂ ಹೇಳುತ್ತಾರೆ. ಮಹನೀಯರಿಂದ ಮೂಡಿ ಬಂದಿರುವ ಚಿತ್ರಗಳೂ ಅಷ್ಟೇ ನಿರ್ದಿಷ್ಟ ಪರಿಣಾಮಕಾರಿ ಎಂಬುದೂ ನಿರ್ವಿವಾದ.

ಆಗ ಮುಂಬಯಿನಲ್ಲಿ ಕಲಿಯುತ್ತಿದ್ದ ಎಸ್.ಆರ್. ಅಯ್ಯಂಗಾರ್, ಶಿಲ್ಪಿ ಬಸವಯ್ಯ ಮುಂತಾದವರು ಮೇಲಿಂದ ಮೇಲೆ ತರುತ್ತಿದ್ದ ಮುಂಬಯಿ ಶಾಲೆಯ ಚಿತ್ರಗಳನ್ನು ನೋಡಿ ರಾಜು ಅವರಿಗೆ ತಾವೂ ಆ ಶಾಲೆಯಲ್ಲಿ ಕಲಿಯುವ ಹಂಬಲವಾಯಿತು. ತಮ್ಮ ಅಭಿಲಾಷೆಯನ್ನು ತಮ್ಮ ಅಭಿಮಾನಿ ಟಾಡ್‌ಹಂಟರ್‌ನಲ್ಲಿ ಭಿನ್ನವಿಸಿಕೊಂಡರು. ರಾಜುರ ಬಗ್ಗೆ ಎಂದೂ ವಿಶ್ವಾಸವಾಗಿದ್ದ ಟಾಡ್‌ಹಂಟರ್ ಅವರ ಈ ಕೋರಿಕೆಯನ್ನು ಮಹಾರಾಜರಿಗೆ ತಿಳಿಸಿ, ಅವರಿಂದ ಒಪ್ಪಿಗೆಯನ್ನು ಗಳಿಸಿದರು.

ಆದರಂತೆ ರಾಜು ಮುಂಬಯಿಗೆ ಪ್ರಯಾಣ ಬೆಳೆಸಿದರು. ಆ ಮಹಾನಗರ ಮತ್ತು ಆ ಹೆಸರುವಾಸಿಯಾದ ಕಲಾಶಾಲೆ ಅವರಿಗೆ ಒಂದು ಹೊಸ ಅನುಭವ. ಅಲ್ಲಿನ ಪರಿಸರ, ವಿದ್ಯಾರ್ಥಿಗಳ ಸಡಗರ ಮತ್ತು ಉಪಾಧ್ಯಾಯರ ಕೀರ್ತಿ ರಾಜುರವರಿಗೆ ಎಷ್ಟು ಉತ್ತೇಜನಕಾರಿಯಾಗಿತ್ತೋ ಅಷ್ಟೇ ದಿಗ್ಭ್ರಮೆ ಹುಟ್ಟಿಸುವಂತಿತ್ತು. ಆದರೆ ಕಲೆಯಲ್ಲಿ ಮುಂದುವರಿಯಬೇಕೆಂಬ ಆಕಾಂಕ್ಷೆಯಲ್ಲಿ ಇದೆಲ್ಲಾ ಗೌಣ. ಅರಮನೆಯ ಬೆಂಬಲದ ಕಾರಣ ಶಾಲೆಯನ್ನು ಸುಲಭವಾಗಿ ಸೇರಿದ್ದಾಯಿತು. ಕಲಿಕೆಯೂ ಪ್ರಾರಂಭವಾಯಿತು.

## ನುರಿತ ಗುರುಗಳು

ಚಿರಪರಿಚಿತರಾದ ಗ್ಲಾಡ್‌ಸ್ಟನ್ ಸಲೋಮನ್, ದುರಂಧರ್, ಟಾಸ್ಕರ್‌ರಂಥ ಮಹನೀಯರೇ ಗುರುಗಳು. ಇವರಲ್ಲದೇ ಮೈಸೂರಿನವರಾದ ಹೆಚ್.ಎಸ್. ಇನಾಮತಿ, ಐಯ್ಯಂಗಾರ್, ಎಂ.ಎ. ಚೆಟ್ಟಿ, ಸತ್ಯನಾರಾಯಣ ಮುಂತಾದವರೂ ಅಲ್ಲಿ ಶಿಷ್ಯರಾಗಿದ್ದರು. ಅದರಿಂದ ರಾಜುರವರು ಅಲ್ಲಿ ಸುಲಭವಾಗಿ ಬೆರೆಯಲು ಸಾಧ್ಯವಾಯಿತು.

ಮುಂಬಯಿಯಲ್ಲಿ ಕೇವಲ ಮೂರೂವರೆ ವರ್ಷಗಳ ಕಾಲ ಕಲಿತರೂ, ಅದು ಬಹಳ ಮಹತ್ವದ ಕಾಲ ಎಂದೇ ರಾಜುರ ಎಣಿಕೆ. ಆ ಶಿಕ್ಷಣವಿಲ್ಲದೇ ಹೋಗಿದ್ದರೆ "ನಾನು ಕೇವಲ ಒಬ್ಬ ಡ್ರಾಯಿಂಗ್ ಮಾಸ್ಟರ್ ಆಗುತ್ತಿದ್ದೆನೇ ವಿನಃ ಕಲಾವಿದನಾಗುತ್ತಿರಲಿಲ್ಲ" ಎನ್ನುತ್ತಾರೆ ಅವರು. ವಿವಿಧ ಪ್ರಕಾರಗಳ ವ್ಯತ್ಯಾಸಗಳಲ್ಲದೇ ಮೂರ್ತಿಚಿತ್ರಣ ಸಂಯೋಜನೆ, ಚಾಕ್‌ನಲ್ಲಿ ಛಾಯೆಯ ನಿರೂಪಣೆ ಮುಂತಾದವನ್ನೆಲ್ಲಾ ಅಭ್ಯಾಸ ಮಾಡಿದರು. ಅಲ್ಲದೇ ಶನಿವಾರ ಆದಿತ್ಯವಾರಗಳಂದು ತಪ್ಪದೇ ನಿಸರ್ಗ ಚಿತ್ರಣದ ತರಬೇತಿ ಸಹ. ಇದಕ್ಕಾಗಿ ಮುಂಬಯಿನ ಆಚೀಚಿನ ಸ್ಥಳಗಳಿಗೆ ಪ್ರಯಾಣ. ಇದೆಲ್ಲ ರಾಜುರವರಿಗೆ ತಮ್ಮ ದೃಷ್ಟಿಯನ್ನು ವಿಸ್ತರಿಸಿಕೊಳ್ಳಲು ಸಾಧಕವಾಯಿತು.

ಈ ಅನುಭವ, ಈ ತರಬೇತಿ, ಅವರಿಗೆ ತಮ್ಮಲ್ಲಿ ಹುದುಗಿದ್ದ ಮನೆತನದ ಕೀರ್ತಿಯ ಬಗ್ಗೆಯೂ ಹೆಮ್ಮೆ ಉಂಟುಮಾಡಿತು. ತಮ್ಮ ಹಿಂದಿನವರಾದ ವೀರಣ್ಣ, ಎಲ್ಲಯ್ಯ, ತಮ್ಮ ತಾತ ಸುಂದರಯ್ಯ, ಅಣ್ಣ ವೈ. ನಾಗರಾಜು, ಅಲ್ಲದೇ ಚಿಕ್ಕಪ್ಪ ಶಂಕರರಾಜುರವರು ಪಡೆದಿದ್ದ ಸಿದ್ಧಿಯನ್ನು ಅರಿಯಲೂ ನೆರವಾಯಿತು. ಅದರಂತೆ ತಾವೂ ಒಬ್ಬ ಶ್ರೇಷ್ಠ ಕಲಾವಿದರಾಗುವ ಬಯಕೆಯೂ ಉದ್ಭವಿಸಿತು. ಆ ಬಯಕೆ ಸಿದ್ಧಿಸಿರುವುದನ್ನು ರಾಜು ಇಂದು ಗಳಿಸಿರುವ ಕೀರ್ತಿ, ತಮ್ಮ ಹರೆಯದಲ್ಲೂ ನಡೆಸಿಕೊಂಡು ಬಂದಿರುವ ಶಿಸ್ತಿನ ಜೀವನ ಮತ್ತು ಸಾರ್ಥಕ ಬದುಕಿನಿಂದ ಯಾರೂ ಅರಿಯಬಹುದು ಈಗಲೂ ತಾವು ಹಿಡಿದ ಕೆಲಸವನ್ನು ಮುಗಿಸುವವರೆಗೂ ಅದರಲ್ಲೇ ತಲ್ಲೀನರಾಗಿ ತಮಗೆ ತೃಪ್ತಿ ತರುವಂತೆ ಆ ಚಿತ್ರ ಮೂಡಿಬರುವವರೆಗೂ ಅವರಿಗೆ ನೆಮ್ಮದಿ ಇರುವುದಿಲ್ಲ, ಬಿಡುವೂ ಇರುವುದಿಲ್ಲ! ಅವರ ಶಿಷ್ಯರೂ ಒಡನಾಡಿಯೂ ಮತ್ತು ಅವರ ಸಾಂಪ್ರದಾಯಿಕ ಶೈಲಿಗೆ ಪುರಸ್ಕಾರ ಸಿಕ್ಕು, ಅದರ ಪುನರುತ್ಥಾನಕ್ಕೆ ಹಲವು ವಿಧದಲ್ಲಿ ಕಾರಣರಾದ ಎಂ.ಎಸ್. ನಂಜುಂಡರಾಯರೇ ಹೇಳುವಂತೆ ಅವರಿಗೆ ಒಂದು ಚಿತ್ರ ತಯಾರಿಸುವಂತೆ ಆದೇಶವಿತ್ತರೆ, ಆ ಕಾರ್ಯ ಮುಗಿಯುವವರೆಗೂ ಸ್ವಲ್ಪವೂ ಸುಧಾರಿಸಿಕೊಳ್ಳದೇ ಚಿತ್ರ ಬಿಡಿಸುವಲ್ಲಿ ತಲ್ಲೀನರಾಗುತ್ತಾರೆ. ಆ ಸಮಯದಲ್ಲಿ ಅವರನ್ನು ರಾತ್ರಿ ಒಂಬತ್ತು ಘಂಟೆಯವರೆಗೂ ಪರಿಷತ್ತಿನ ತಮ್ಮ ಕೋಣೆಯಲ್ಲಿ ತದೇಕಚಿತ್ತರಾಗಿ ಕಾರ್ಯತತ್ಪರರಾಗಿರುವುದನ್ನೂ ಕಾಣಬಹುದು. ಇದು ಅವರ ತಾರುಣ್ಯದ ದಿನಗಳಿಗೆ ಹೇಗೆ ನಿಜವೋ, ತಮ್ಮ ಇಳೀ ವಯಸ್ಸಿನ ಇಂದಿಗೂ ಅಷ್ಟೇ ನಿಜ. ಇದನ್ನು 1986ರ ನವೆಂಬರ್ ತಿಂಗಳಲ್ಲಿ ನಗರದಲ್ಲಿ ಜರುಗಿದ 'ಸಾರ್ಕ್' ಸಮ್ಮೇಳನದ ಸ್ವಾಗತ ಸಮಿತಿಯ ಸಲುವಾಗಿ ನಿರ್ಮಿಸಿದ ಬೃಹತ್ ಭಿತ್ತಿ ಚಿತ್ರದ ನಕಲು ಮಾಡಲು ತೊಡಗಿದ್ದಾಗ ನೋಡಬಹುದಿತ್ತು. ಆಗ ರಾಜುರವರಿಗೆ ತಮ್ಮ ಎಂಬತ್ತನೆಯ ಹುಟ್ಟುಹಬ್ಬದ ಆಚರಣೆಗೆ ಕೇವಲ 20 ದಿನಗಳಿದ್ದುವು.

ಇದರ ನಂತರ ನಡೆದ ಅದೇ ಸಮ್ಮೇಳನದ ಸಂದರ್ಭದಲ್ಲಿ ಜರುಗಿದ ಕಲಾಶಿಬಿರದಲ್ಲೂ ಈ ಲವಲವಿಕೆಯನ್ನು ಕಾಣಬಹುದಿತ್ತು. ಐವತ್ತಕ್ಕೂ ಹೆಚ್ಚು ಕಲಾವಿದರು ಸೇರಿದ್ದ ಆ ಶಿಬಿರದಲ್ಲಿ ಅನೇಕ ಯುವಕ ಯುವತಿಯರು ಕಲಾ ಚಟುವಟಿಕೆಯಲ್ಲದೇ ಇತರ ಅನೇಕ ವಿಧವಾದ ಮಾತುಕತೆ, ಮನರಂಜನೆಗಳಲ್ಲಿ ತೊಡಗಿದ್ದಿರಬಹುದು. ಆದರೆ ರಾಜು ತಾವು ಲೆಕ್ಕ ಹಾಕಿಕೊಂಡಿದ್ದಂತೆ ಒಂದು ಸಾಂಪ್ರದಾಯಿಕ ಶೈಲಿಯ ಚಿತ್ರದ ರೇಖಾ ನಮೂನೆಯನ್ನು ತಯಾರಿಸಿ, ಅದಕ್ಕನುಗುಣವಾದ ವರ್ಣಗಳಿಂದ ಬೆಳಗಿಸಿ, ಚಿಸ್ಲೋವನ್ನು ಸೋಂಕಿಸಿ, ಅದಕ್ಕೆ ಚಿನ್ನದ ಹಾಳೆಯ ಮೆರಗನ್ನಿತ್ತು ಒಂದೇ ಸಮನಾಗಿ ಮುಗಿಸಿದ್ದಲ್ಲದೇ ಅದಕ್ಕೆ ತಕ್ಕ ಗಾಜು, ಚೌಕಟ್ಟುಗಳನ್ನು ಹಾಕಿಸಿ ಪರಿಷತ್ತಿಗೆ ತಂದು, ಅದರ ಅನಾವರಣವನ್ನೂ ತಾವೇ ಮಾಡಿ ಸಿಹಿ ಹಂಚಿದ ಮೇಲೆಯೇ ನೆಮ್ಮದಿ. ಅಬ್ಬಾ, ಅದೆಂತಹ ತದೇಕಚಿತ್ತ ಅವರದು ಮತ್ತು ಹಿಡಿದ ಕೆಲಸವನ್ನು ಅಚ್ಚುಕಟ್ಟಾಗಿ ನೆರವೇರಿಸುವಲ್ಲಿ ಎಂತಹ ಶಿಸ್ತು!

**ಡಿಪ್ಲೋಮಾ ಗಳಿಕೆ**

ಮುಂಬಯಿಯಲ್ಲಿ ಡ್ರಾಯಿಂಗ್ ಮತ್ತು ಚಿತ್ರಕಲೆಯ ಮುಂದುವರಿದ ಪರೀಕ್ಷೆಗಳಲ್ಲಿ ಉತ್ತಮ ಮಟ್ಟದಲ್ಲಿ ತೇರ್ಗಡೆಯಾಗಿ 1928ರಲ್ಲಿ ನಾಲ್ಕನೇ ವರ್ಷದ ಚಿತ್ರಕಲೆಯ ಶಿಕ್ಷಣವನ್ನು ಆರಂಭಿಸಿ ಆ ಪರೀಕ್ಷೆಯಲ್ಲಿ ಎಂದರೆ ಐದು ವರ್ಷದ ಡಿಪ್ಲೋಮಾವನ್ನು 1930ರ ಸುಮಾರಿಗೆ ಪಡೆದರು. ಅದೇ ಸುಮಾರಿಗೆ ಬರೋಡಾ ಅರಮನೆಯ ಮೇಲ್ಛಾವಣಿಯ ಅಲಂಕರಣ ಜವಾಬ್ದಾರಿಯನ್ನು ನಿರ್ವಹಿಸಿದ ಜೆ.ಜೆ. ಸ್ಕೂಲಿನ ವಿದ್ಯಾರ್ಥಿಗಳ ಗುಂಪಿನಲ್ಲಿ ರಾಜೂರವರೂ ಸೇರಿದ್ದರು. ಅದಕ್ಕೆ ನಮೂನೆಗಳನ್ನು ತಯಾರಿಸಿ, ಅವುಗಳಂತೆ ಚಿತ್ರಗಳನ್ನೂ ಬಿಡಿಸಿ, ಅವಕ್ಕೆ ಮೆರುಗು ಕೊಟ್ಟವರಲ್ಲಿ ಇವರೂ ಇದ್ದರು. ಮುಂದೆ ಆ ನಮೂನೆಗಳು ಲಂಡನ್‌ನಲ್ಲಿ "ಲಂಡನ್‌ನಲ್ಲಿ ಭಾರತೀಯ ಕಲೆಗಳ ಪ್ರತೀಕ" ಎಂಬ ಶೀರ್ಷಿಕೆಯಡಿಯಲ್ಲಿ ಪ್ರದರ್ಶಿಸಲ್ಪಟ್ಟು ಬಹು ಜನರ ಮೆಚ್ಚುಗೆಯನ್ನೂ ಗಳಿಸಿದುವು. "ಅಭ್ಯಾಸ ಮಾಡಲು ಯೋಗ್ಯ" ಎಂಬುದಾಗಿ ಅವುಗಳನ್ನು ಮಾನ್ಯ ಮಾಡಲಾಗಿತ್ತು.

ಈ ವ್ಯಾಸಂಗದಿಂದ ನುರಿತ ಕಲಾವಿದನಾಗಿ ಹಿಂದಿರುಗಿದ ನಂತರವೇ ಅವರಿಗೆ ವಿವಾಹವಾದದ್ದು. ಕನ್ಯೆ ಬೆಂಗಳೂರಿನ ಸರಿಗೆ ಸಿ. ವೆಂಕಟರಮಣಯ್ಯ ಎಂಬ ಜವಾಹಿರಿ ವ್ಯಾಪಾರಿಯ ಪುತ್ರಿ. ಶಾರದ ರಾಜುರವರ ಕಲಾಜೀವನದ ಶಕ್ತಿಯಾಗಿ, ಅವರ ಸಂಸಾರದ ಸುಖ ಸಂಪತ್ತಿನ ಅಸ್ತಿಭಾರವಾಗಿ ಈಕೆ ಅವರಿಗೆ ಭುಜಕ್ಕೆ ಭುಜ ಕೊಟ್ಟು ಸಹಕರಿಸಿದ್ದಾರೆ ಎಂಬುದನ್ನು ಅವರ ಚೊಕ್ಕ ಸಂಸಾರದಲ್ಲಿ ಕಾಣಬಹುದು.

ಅದೇ ಸಮಯದಲ್ಲಿ ಅರಮನೆಯ ಹುಜೂರ್ ಸಚಿವರ ಆದೇಶದಂತೆ ರಾಜು ಮೈಸೂರು ಸಿಟಿಯ ಸಚಿತ್ರ ನಮೂನೆಯೊಂದನ್ನು ತಯಾರಿಸಿ, ಮಹಾರಾಜ ಕೃಷ್ಣರಾಜ ಒಡೆಯರ ಮೆಚ್ಚುಗೆಯನ್ನು ಪಡೆದರು. ಆಗ ಮೈಸೂರಿನಲ್ಲಿ ಕಮೀಷನರ್ ಆಗಿದ್ದ ಎಂ.ಎ. ಶ್ರೀನಿವಾಸನ್ ಸಹ ಅದನ್ನು ಬಹಳವಾಗಿ ಮೆಚ್ಚಿದರು.

## ಖ್ಯಾತ ಪ್ಯಾನೆಲ್‌ಗಳು

ಇದಾದ ನಂತರವೇ ವಿಶ್ವವಿಖ್ಯಾತವಾದ ಮೈಸೂರು ಅರಮನೆಯ ಕಲ್ಯಾಣ ಮಂಟಪದ ಅಲಂಕಾರಕ್ಕೆ ಒದಗುವಂತೆ ಪ್ಯಾನೆಲ್‌ಗಳ ನಿರ್ಮಾಣಕ್ಕೆ ಆದೇಶ ಬಂದದ್ದು. ಈ 28 ಪ್ಯಾನೆಲ್‌ಗಳ ಸರಣಿಯಲ್ಲಿ ರಾಜು ಆರು ಪ್ಯಾನೆಲ್‌ಗಳನ್ನು ತಯಾರಿಸಿದ್ದಾರೆ. ಸುಮಾರು 13 x 7.5 ಆಕಾರದ ಈ ಎಲ್ಲ ಪ್ಯಾನೆಲ್‌ಗಳಲ್ಲೂ ಒಂದೇ ವಿಧವಾದ ವರ್ಣ ಛಾಯೆ, ವ್ಯಕ್ತಿ ಚಿತ್ರಣ ಮತ್ತು ಸೊಗಸಾದ ವಸ್ತುನಿರೂಪಣೆಯಿಂದ ಕೂಡಿದ್ದರೂ, ಅವುಗಳನ್ನು ನಿರ್ಮಿಸಿದ, ಮೊದಲೇ ಹೇಳಿರುವ ಕಲಾವಿದರ ವೈಶಿಷ್ಟ್ಯಗಳನ್ನೂ ಗಮನಿಸಬಹುದು. ರಾಜು ಬಿಡಿಸಿದ ಆ ಆರು ಪ್ಯಾನೆಲ್‌ಗಳೆಂದರೆ:

1. ನಂ. 24 ನೇಪತ್ ಆನೆ
2. ನಂ. 05 ಮೈಸೂರಿನ ಮೂರನೇ ಪಡೆ
3. ನಂ 10 ಪಟ್ಟದ ಆನೆ, ಕುದುರೆ ಮತ್ತು ಪಲ್ಲಕ್ಕಿ
4. ನಂ. 18 ಶ್ರೀರಾಮ ಚಾಮುಂಡೇಶ್ವರಿಯ ಮುಂದೆ ಆಯುಧ ಪೂಜೆ ಮಾಡುತ್ತಿರುವುದು
5. ನಂ. 23 ಹಿಂಬದಿಯ ಪಹರೆಯ ಕುದುರೆ
6. ನಂ. 28 ಆನೆಗಾಡಿ, ಒಂಬತ್ತು ಸೀಟಿನ ವಾಹನ ಮತ್ತು ಅಂಬ್ಯುಲೆನ್ಸ್

ರಾಜುರವರಲ್ಲದೆ ಈ ಪ್ಯಾನೆಲ್‌ಗಳ ನಿರ್ಮಾಣದಲ್ಲಿ ತೊಡಗಿದ್ದ ಇತರ ಕಲಾವಿದರೆಂದರೆ ಎಸ್.ಆರ್. ಅಯ್ಯಂಗಾರ್, ಕೆ. ಕೇಶವಯ್ಯ, ಎಸ್. ನಂಜುಂಡಸ್ವಾಮಿ , ವೈ. ನಾಗರಾಜು, ಎಸ್. ಶಂಕರರಾಜು ಮತ್ತು ಎಸ್. ನರಸಿಂಹಸ್ವಾಮಿ ಇವರೆಲ್ಲ ಹೆಸರಾಂತ ಕಲಾವಿದರು ಮತ್ತು ಮೈಸೂರಿನ ಕಲಾಸಂಪತ್ತನ್ನು ಬೆಳೆಸಿದವರು, ಉಳಿಸಿದವರು.

ಅದೇ ಸುಮಾರಿಗೆ, ಅರಮನೆಯ ಮೇಲ್ಹಾವಣಿಯ ನಮೂನೆಗೆಂದು ಏರ್ಪಡಿಸಿದ್ದ ಸ್ಪರ್ಧೆ ಒಂದರಲ್ಲಿ ಸುಬ್ರಮಣ್ಯರಾಜುರವರಿಗೆ ಒಂದು ಬಹುಮಾನ ದೊರಕಿದ್ದು ಅವರ ಏಳಿಗೆಗೆ, ಅವರ ಪ್ರತಿಭೆಯ ಪ್ರಕಾಶಕ್ಕೆ ಪುಟವಿಟ್ಟಂತಾಯಿತು. ಈ ಎಲ್ಲ ಕೀರ್ತಿಗಳಿಂದ ರಾಜು ಆಗ ರಾಜ್ಯದ ತಾಂತ್ರಿಕ ಮತ್ತು ವಾಣಿಜ್ಯ ಶಾಖೆಯ ಮುಖ್ಯಾಧಿಕಾರಿಯಾಗಿದ್ದ ಎಸ್.ಜಿ. ಶಾಸ್ತ್ರಿಯವರ ಕಣ್ಣಿಗೆ ಬೀಳುವಂತಾದರು. ಚಾಮರಾಜ ತಾಂತ್ರಿಕ ಶಾಲೆ ಈ ಶಾಖೆಯ ಸುಬರ್ದಿನಲ್ಲಿದ್ದುದರಿಂದ ಶಾಸ್ತ್ರಿಗಳು ರಾಜುರನ್ನೂ ಆ ಶಾಲೆಯ ಉಪಾಧ್ಯಾಯರನ್ನಾಗಿ ನೇಮಿಸಿದರು. ತಾವು ಕಲಿತ ಆ ಶಾಲೆಗೆ ಉಪಾಧ್ಯಾಯರಾಗಿ ರಾಜು 1936ರಲ್ಲಿ ಮತ್ತೆ ಪ್ರವೇಶಿಸಿದಂತಾಯಿತು. ಅದು ಶಿಷ್ಯನಾಗಲ್ಲ ಗುರುವಾಗಿ.

ಹೀಗೆ ಸರ್ಕಾರಿ ನೌಕರಿಯಲ್ಲಿ ಆರಂಭವಾದ ಅವರ ವೃತ್ತಿ ಅವರಿಗೆ ತೃಪ್ತಿ ತಂದಿದೆ ಮತ್ತು ಜೀವನದಲ್ಲಿ ಒಂದು ಸ್ಥಿರತೆಯನ್ನೂ ತಂದುಕೊಟ್ಟಿದೆ ಎಂಬುದನ್ನು ಅವರ ಜೀವನದಲ್ಲಿ ಕಾಣಬಹುದು. ಆ ವೃತ್ತಿಯಿಂದ ರಾಜು ಸಂಪ್ರದಾಯ ಕಲೆಯ ಪ್ರತಿಪಾದಕರಾದರೂ ತಮ್ಮ ಉಡುಪನ್ನು ಮಾತ್ರ ಆಂಗ್ಲರ (ಟಾಡ್‌ಹಂಟರ್‌ರ) ಮಾದರಿಯಲ್ಲಿಯೇ ಉಳಿಸಿಕೊಂಡರು!

ಶಾಲೆಯಲ್ಲಿ ಲಲಿತಕಲೆಗಳ ವಿವಿಧ ಭಾಗಗಳಲ್ಲದೇ ಕುಶಲ ಕಲೆಯ ಪ್ರಕಾರಗಳಾದ ಪೇಪರ್ ಮಶಿಯಲ್ಲಿ ನಮೂನೆಗಳನ್ನು ತಯಾರು ಮಾಡುವುದನ್ನೂ ಕಲಿಸುತ್ತಿದ್ದರು. ಜೊತೆಗೆ ತಮ್ಮ ಕೃತಿ ರಚನೆಯ ಕೆಲಸವೂ ಎಡಬಿಡದೇ ಸಾಗಿತ್ತು. ಅಲ್ಲದೇ ಆ ದಿನಗಳಲ್ಲಿ ಜರುಗಿದ ಗ್ರಾಮೀಣ ಕೈಗಾರಿಕೆಗಳ ಶತಮಾನೋತ್ಸವ, ಗುಬ್ಬಿ ನಾಟಕ ಕಂಪನಿಯ ಚಿನ್ನದ ಹಬ್ಬ ಮುಂತಾದ ಸಾರ್ವಜನಿಕ ಕಾರ್ಯಕ್ರಮಗಳಲ್ಲಿಯೂ ಪಾತ್ರವಹಿಸಿ, ಅವುಗಳಿಗೆ ಸಂಬಂಧಿಸಿದ ಕಲಾ ವಿಭಾಗದಲ್ಲಿ ಕಾರ್ಯ ನಿರ್ವಹಿಸಿದರು. ಅಂತೆಯೇ ಮೈಸೂರಿನ ವೈಭವೋಪೂರಿತ ದಸರಾ ವಸ್ತು ಪ್ರದರ್ಶನದ ಕಲಾ ಪ್ರದರ್ಶನ ಸಮಿತಿಯಲ್ಲಿ ಇವರ ಪಾತ್ರ ಹಿರಿದಾಗಿತ್ತು. ಅವರು ಇಂದಿಗೂ ಹೆಮ್ಮೆಪಡುವ "ರಾಸಕ್ರೀಡೆ"ಯ ಸಂಯೋಜನೆ ಅದೇ ಸಮಯದಲ್ಲಿ ಮೂಡಿಬಂದದ್ದು. ಈ ಸುಂದರ ಚಿತ್ರ ಮೈಸೂರಿನ ಅವರ ಪರಿಚಿತರ ಮನೆಯಲ್ಲಿದೆ.

ಅದು ಅವರಿಗೆ ಪುರಸೊತ್ತಿಲ್ಲದ ಕಾಲ. ಆದರೂ ಅವರ ಕೃತಿ ರಚನೆಯಲ್ಲಿ ಇದಾವುದೂ ಅಡೆತಡೆಯನ್ನು ಮಾಡಲಿಲ್ಲ, ಅದು ನಡೆದೇ ಇತ್ತು. ಅವರ ಕೃತಿಗಳು ಅಲ್ಲಲ್ಲಿ ಪ್ರದರ್ಶಿಸಲ್ಪಟ್ಟು ಬಹುಮಾನಗಳನ್ನು ಗಳಿಸುತ್ತಲೇ ಇದ್ದವು. ಶಾಲೆಯಲ್ಲಿ ಸಹಾಯಕ ಸೂಪರಿಂಟೆಂಡೆಂಟರಾಗಿ (ಆಕ್ಟಿಂಗ್) ಕೆಲಸ ನಿರ್ವಹಿಸುತ್ತಿದ್ದಾಗ ರಾಜುರವರು, ಅದೇ ಶಾಲೆಯ ಸುಬರ್ದಿನಲ್ಲಿದ್ದ ಬೆಂಗಳೂರಿನ ಕುಶಲ ಕಲಾ ಎಂಪೋರಿಯಂ (ಕಾವೇರಿ)ಗೆ ವರ್ಗಾಯಿಸಲ್ಪಟ್ಟರು. ಇದರಿಂದ ಅವರು 1951ರಲ್ಲಿ ಬೆಂಗಳೂರಿಗೆ ಬಂದು ಆ ಪ್ರಖ್ಯಾತ ಮಳಿಗೆಯ ಮ್ಯಾನೇಜರ್ ಆಗಿ ಸೇರಿದರು. ಅದರಿಂದ ಅವರ ಸಂಪರ್ಕ ಬೆಳೆದು ಹಲವು ಮಹನೀಯರ ಪರಿಚಯವಾಗಲು ನೆರವಾಯಿತು. ಅವರ ದಸರಾ ಮೆರವಣಿಗೆಯ ನಕಲುಗಳು ಆಗ ಹೇರಳವಾಗಿ ಮಾರಾಟವಾದುವು.

ರಾಜು ತಮ್ಮ 26 ವರ್ಷಗಳ ಸರ್ಕಾರಿ ಸೇವೆಯಿಂದ ಆ ಮಳಿಗೆಯಲ್ಲೇ 1963ರಲ್ಲಿ ನಿವೃತ್ತರಾದರು. ಆದರೆ ಸರ್ಕಾರವು ಅವರನ್ನು ದಾವಣಗೆರೆಯಲ್ಲಿ ಅದೇ ತಾನೇ ಆರಂಭವಾಗಿದ್ದ ಕುಶಲ ಮತ್ತು ಲಲಿತಕಲಾ ಶಾಲೆಯಲ್ಲಿ ಉಪನ್ಯಾಸಕರನ್ನಾಗಿ ನೇಮಿಸಿತ್ತು. ರಾಜು ಮತ್ತೆ ಕಲಾ ಶಿಕ್ಷಕರಾಗಿ, ಅಲ್ಲಿ ಬಳಕೆಗೆ ಬಂದಿದ್ದ ಅಕೆಡೆಮಿಕ್ ಶೈಲಿಯನ್ನು ಕಲಿಸಲು ತೊಡಗಿದರು. ಆಗ ಶಾಲೆಯ ಪ್ರಾಂಶುಪಾಲರು ಮಲ್ಲೇಗೌಡರು. ಅವರು ರಾಜುರವರ ಪ್ರತಿಭೆ, ಖ್ಯಾತಿಗಳನ್ನರಿತು ಗೌರವಿಸುತ್ತಿದ್ದರು. ಎಂ.ವಿ. ಮಿಣಜಗಿ ಆಗ ಆ ಶಾಲೆಯ ವಿಸಿಟಿಂಗ್ ಪ್ರೊಫೆಸರ್. ಹೀಗೆ ಆ ಶಾಲೆಯಲ್ಲಿ ಅವರ ಮೂರುವರೆ ವರ್ಷಗಳ ಸೇವೆ ಹರ್ಷದಾಯಕ, ಉಪಯುಕ್ತ ಎಂದೇ ರಾಜುರ ಎಣಿಕೆ.

ಇದಾದ ನಂತರ, 1967ರ ಸುಮಾರಿಗೆ ಅದೇ ತಾನೇ ಬೆಂಗಳೂರಿನಲ್ಲಿ ಆರಂಭವಾಗಿ ತನ್ನ ವ್ಯಾಪ್ತಿಯನ್ನು ಸ್ವಲ್ಪ ಸ್ವಲ್ಪವಾಗಿ ಹರಡಿಸುತ್ತಿದ್ದ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಪದಾಧಿಕಾರಿಗಳಾದ ಆರ್ಯಮೂರ್ತಿ ಮತ್ತು ಎಂ.ಎಸ್. ನಂಜುಂಡರಾವ್ ಅವರುಗಳು ರಾಜುರವರನ್ನು ಭೇಟಿ ಮಾಡಿ, ಆ ಪರಿಷತ್ತಿನ ಅಧ್ಯಾಪಕ ವರ್ಗವನ್ನು ಸೇರುವಂತೆ ಬಿನ್ನವಿಸಿಕೊಂಡರು. ಈ ಇಬ್ಬರು ಮಹನೀಯರೂ ರಾಜುರವರಿಗೆ ಪರಿಚಿತರೇ, ಅಲ್ಲದೇ, ನಂಜುಂಡರಾವ್ ಇವರ ಶಿಷ್ಯರಾಗಿಯೂ ಇದ್ದವರು. ಇವರುಗಳ ಆಹ್ವಾನ ನಿರಾಕರಿಸುವಂತಿರಲಿಲ್ಲ, ಒಪ್ಪಿಗೆ ನೀಡಿದರು ಮತ್ತು ಇದರಿಂದ ಅವರಲ್ಲಿ ಸುಪ್ತವಾಗಿದ್ದ ಸಾಂಪ್ರದಾಯಿಕ ಶೈಲಿಯ ಪ್ರತಿಭೆ ಬೆಳಕಿಗೆ ಬರಲೂ ಸಾಧ್ಯವಾಯಿತು.

ಹೌದು, ರಾಜುರವರ ಮನೆತನದಲ್ಲಿ ಎಲ್ಲರಿಗೂ ಈ ಸಾಂಪ್ರದಾಯದಲ್ಲಿ ಎಂದರೆ ದೇವತಾ ಮೂರ್ತಿಗಳನ್ನು ಅಲಂಕಾರಿಕವಾಗಿ ರಚಿಸುವ ಕಲೆ ರಕ್ತಗತವಾಗಿ ಬೆಳೆದು ಬಂದಿತ್ತು. ಅದಕ್ಕೆ ಬಳಸುವ ಟೆಂಪೆರಾ ಮಾದರಿಯ ವರ್ಣವೈಖರಿ, ಜೆಸ್ಸೋವನ್ನೂ ತಯಾರಿಸಿ. ಬಳಸಿ ಅದಕ್ಕೆ ಚಿನ್ನದ ರೇಖಿನ ಬೆಡಗನ್ನಿತ್ತು ಚಿತ್ರದ ಸೊಬಗನ್ನು ಹೆಚ್ಚಿಸುವುದು ಎಲ್ಲಾ ಅವರಿಗೆ ಕರಗತ. ಆದರೆ ಈ ತಂತ್ರ ಬಳಕೆಗೆ ಬಂದು ಅದು ಅವರಿಗೆ ಹೊಸ ಚೇತನ ಮೂಡಿಸುವಂತಾದದ್ದು ಅವರು ಸರ್ಕಾರಿ ಚಾಕರಿಯಿಂದ ನಿವೃತ್ತರಾದ ನಂತರವೇ. ಈ ಚೇತನ ಎಷ್ಟು ಬೆಳೆಯುತ್ತಾ ಹೋಯಿತೆಂದರೆ ಈಗ ಸುಬ್ರಮಣ್ಯರಾಜು ಅವರ ಶೈಲಿ ಆ ಸಾಂಪ್ರದಾಯದಲ್ಲಿ ಬೆರೆತು ಹೋಗಿದೆ. ಒಂದರ ಹೆಸರನ್ನುಚ್ಚರಿಸಿದರೆ ಮತ್ತೊಂದು ಕಣ್ಣೆದುರಿಗೆ ನಿಲ್ಲುವಂತಾಗಿದೆ. ಈ ಹೊಂದಾಣಿಕೆಗೆ, ಈ ಕೀರ್ತಿಗೆ ಅವರು ಎಷ್ಟು ಯೋಗ್ಯರು ಎಂಬುದನ್ನು ಅವರು ಆ ಕ್ಷೇತ್ರದಲ್ಲಿ ಮಾಡಿರುವ ಮಹತ್ಕಾರ್ಯಗಳಿಂದ ಅರಿಯಬಹುದು.

ರಾಜು ಚಿತ್ರಕಲಾ ಪರಿಷತ್ತನ್ನು ಸೇರಿದ್ದು 1970ರ ಸುಮಾರಿನಲ್ಲಿ. ಆಗ ಪರಿಷತ್ತು ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘದ ಮಹಡಿಯಲ್ಲಿ ತನ್ನ ಕಲಾಶಾಲೆಯನ್ನು ನಡೆಸುತ್ತಿತ್ತು. ಶಾಲೆಯಲ್ಲದೇ ಕಲೆಗೆ ಸಂಬಂಧಿಸಿದ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ಪರಿಷತ್ತಿನ ಸಂಚಾಲಕರಾದ ನಂಜುಂಡರಾಯರಿಗೆ, ರಾಜು ಅವರು ಬಂದದ್ದು ಒಂದು ಹೊಸ ಹುರುಪು ಬಂದಂತಾಯಿತು. ತೊಗಲು ಬೊಂಬೆಗಳ ಸಂಗ್ರಹ, ಸಾಂಪ್ರದಾಯಿಕ ಶೈಲಿಯ ಚಿತ್ರಗಳ ಒಂದು ಸಮೀಕ್ಷೆ ಮುಂತಾದ ಕಾರ್ಯಗಳನ್ನು ರೂಪಿಸಿಕೊಂಡರು. ಜೊತೆಗೆ ರಾಜು ವಿದ್ಯಾರ್ಥಿಗಳಿಗೆ ಮಾರ್ಗದರ್ಶನವೀಯುವ ಕಾರ್ಯವೂ ಜರುಗುತ್ತಿತ್ತು. ಅದರಿಂದ ರಾಜುರ ಪ್ರಾಮುಖ್ಯತೆ ಹೆಚ್ಚಿ, ಅವರನ್ನು ಪರಿಷತ್ತಿನ ಉಪಾಧ್ಯಕ್ಷರನ್ನಾಗಿ ಆರಿಸಲಾಗಿತ್ತು. ಈಗಲೂ ಅವರು ಈ ಪದವಿಯನ್ನು ಅಲಂಕರಿಸುತ್ತಾ ಬಂದಿದ್ದಾರೆ. ಪರಿಷತ್ತಿನ ಕಾರ್ಯಕಲಾಪಗಳಲ್ಲೆಲ್ಲಾ ಪ್ರಮುಖ ಪಾತ್ರ ವಹಿಸುತ್ತಲಿದ್ದಾರೆ.

## ಶಿಷ್ಯವೃಂದ

ಅದೇ ನಂಜುಂಡರಾಯರ ಪ್ರಭಾವದಿಂದ ಮತ್ತೊಂದು ಯೋಜನೆ ಮೂಡುವಂತಾಯಿತು. ಅದು ಸುಬ್ರಮಣ್ಯರಾಜುರವರಿಂದ ಸಾಂಪ್ರದಾಯಿಕ ಶೈಲಿಯಲ್ಲಿ ಶಿಕ್ಷಣ ಒದಗಿಸುವುದು.

ಇದಕ್ಕನುಗುಣವಾಗಿ ಅಖಿಲ ಭಾರತ ಕುಶಲ ಕಲಾ ಅಭಿವೃದ್ಧಿ ನಿಗಮವು ಒಂದು ವಿದ್ಯಾರ್ಥಿ ವೇತನವನ್ನು ಮಂಜೂರು ಮಾಡಿತು. ಇದರಂತೆ ಪರಿಷತ್ತಿನ ಆಶ್ರಯದಲ್ಲಿ ಈ ಯೋಜನೆ ರೂಪುಗೊಂಡು ಹಲವು ವಿದ್ಯಾರ್ಥಿಗಳು ಬೆಳಕಿಗೆ ಬರಲು ಸಾಧ್ಯವಾಗಿದೆ. ಇದಲ್ಲದೇ ಈಗ ಈ ಶೈಲಿಯಲ್ಲಿ ಪ್ರವರ್ಧಮಾನಕ್ಕೆ ಬಂದಿರುವ ಕಮಲಾಕ್ಷಿ, ಸರಸ್ವತಿ ಬಸವರಾಜು, ವಿನೋದ, ಅಪ್ಪಾಜಿ, ನೀಲಾ ಪಂಚ್, ರಾಜುರವರ ಇಬ್ಬರು ಪುತ್ರರಾದ ವಿಶ್ವೇಶ್ವರ ಮತ್ತು ಕೃಷ್ಣಾನಂದರೆಲ್ಲಾ ರಾಜು ಅವರ ಶಿಷ್ಯ ಬಳಗದವರೇ. ಇದು ರಾಜುರವರಿಗೆ ತೃಪ್ತಿ ತಂದಿರುವ ವಿಷಯಗಳಲ್ಲಿ ಅತಿ ಮುಖ್ಯವಾದುದು.

ಇವರಲ್ಲದೇ ಎಂ.ಹೆಚ್. ರಾಮು, ಎಂ.ಎಸ್. ಚಂದ್ರಶೇಖರ್ ಮುಂತಾದ ಅವರ ಹಳೆಯ ಶಿಷ್ಯರ ಬಗ್ಗೆಯೂ ರಾಜುರವರಿಗೆ ಹೆಮ್ಮೆಯೇ. ಪರಿಷತ್ತನ್ನು ಸೇರಿದ ನಂತರ ರಾಜುರವರ ಖ್ಯಾತಿ ಮತ್ತಷ್ಟು ವಿಸ್ತರಿಸಿತು. ಅವರು ಸೇರಿದ ಹೊಸದರಲ್ಲಿ ರಾಜ್ಯದ ಲಲಿತಕಲಾ ಅಕಾಡೆಮಿ ಶ್ರವಣಬೆಳಗೊಳದ ಭಿತ್ತಿಚಿತ್ರಗಳ ನಕಲು ಕಾರ್ಯವನ್ನು ಹಾಕಿಕೊಂಡಾಗ, ಆ ಕಾರ್ಯವನ್ನು ನಿರ್ವಹಿಸಲು ರಾಜುರ ಹೆಸರನ್ನೂ ಸೂಚಿಸಲಾಯಿತು. ಹೀಗೆ ತೊಡಗಿದ ಈ ನಕಲು ಕಾರ್ಯ ಆಗಿನಿಂದ ಈಗಿನವರೆಗೂ ನಡೆದೇ ಬಂದಿದೆ. ಮುಂದೆ ಹಿರಿಯೂರಿನ ಭಿತ್ತಿಚಿತ್ರಗಳನ್ನು ನಕಲು ಮಾಡಿದರು. ಈ ನಕಲುಗಳೆಲ್ಲಾ ಅಕಾಡೆಮಿಯ ಸಂಗ್ರಹದಲ್ಲಿವೆ. ಅಲ್ಲದೇ ತಮ್ಮ ಸಂತೋಷಕ್ಕಾಗಿಯೂ ಅಲ್ಲಲ್ಲಿ ಕಂಡ ಆ ಶೈಲಿಯ ಚಿತ್ರಗಳನ್ನು ಸ್ಕೆಚ್ ಮಾಡುವ ಅಭ್ಯಾಸವನ್ನು ಅವರು ತಮ್ಮ ಎಂಬತ್ತರ ಹರೆಯದಲ್ಲೂ ಕಡೆಗಣಿಸಿಲ್ಲ.

ಇಷ್ಟೆಲ್ಲಾ ಆದರೂ, ಅವರಿಗೆ ಇಂದಿಗೂ ನೆಮ್ಮದಿ ಕೊಟ್ಟಿರುವ, ಹಿತವಾದ ಕೃತಿ ಅಂದರೆ ಅದು "ಗಿರಿಜಾ ಕಲ್ಯಾಣ". ಇದು ಚಿತ್ರಕಲಾ ಪರಿಷತ್ತಿನ ಆವರಣದಲ್ಲಿದೆ. ಆ ಸಂಯೋಜನೆಯಲ್ಲಿ ಮೂಡಿ ಬರುವ ವಿವಿಧ ವ್ಯಕ್ತಿಗಳ ಚಿತ್ರಣ ಅವರಿಗೆ ಮೆಚ್ಚು. ಅವರ ಆ ಕೃತಿ ಮತ್ತು ವರ್ಣ ವೈಖರಿ ಅವರಿಗೆ ಹಿತ ಮತ್ತು ಅದಕ್ಕೆ ಬಳಸಲಾದ ಅಲಂಕಾರ ಅವರಿಗೆ ಒಂದು ಸವಾಲು. ಈ ಅಂಶಗಳೆಲ್ಲಾ ಇದ್ದರೇನೇ ಚಿತ್ರದ ಸೊಬಗು ಎನ್ನುತ್ತಾರೆ ರಾಜು.

ಈ ಅಂಶಗಳೆಲ್ಲಾ ಅವರು ರಚಿಸಿರುವ ಪ್ರಸಿದ್ಧ ಮೈಸೂರು ಅರಮನೆಯ ಪ್ಯಾನೆಲ್‌ಗಳಲ್ಲಿ ಯಥಾವತ್ತಾಗಿ ಮೂಡಿಬಂದಿವೆ. ಮೊದಲೇ ಹೇಳಿರುವಂತೆ ಆ 28 ಪ್ಯಾನೆಲ್‌ಗಳಲ್ಲಿ ಆರು ಸುಬ್ರಹ್ಮಣ್ಯರಾಜುರವರಿಂದ ತಯಾರಿಸಲ್ಪಟ್ಟಿವೆ. ಅವುಗಳ ಚಿತ್ರಣದಲ್ಲಿ ಮಾನವ ಮತ್ತು ಪ್ರಾಣಿಗಳ ಆಕೃತಿಗಳಲ್ಲಿ ಕಂಡುಬರುವ ನೈಜತೆಗೆ ಎಷ್ಟು ಮಹತ್ವವೋ ಅಷ್ಟೇ ಮಹತ್ವವನ್ನು ಚಿತ್ರದಲ್ಲಿನ ಸಂಯೋಜನೆ ವಿವರಣೆ ಮತ್ತು ವರ್ಣವೈವಿಧ್ಯದಲ್ಲಿಯೂ ಕಾಣಬಹುದು. ಅವು ಅಂದಿನ ಜನಜೀವನದ ಒಂದು ಕನ್ನಡಿ ಎಂದು ವರ್ಣಿಸಿದರೂ ಉತ್ಪ್ರೇಕ್ಷೆಯಲ್ಲ. ಕಾರಣ ಜನರ ಉಡುಗೆ, ತೊಡುಗೆ ಅವರು ನಿಲ್ಲುವ ಭಂಗಿ ಮತ್ತು ರಾಜಸ್ಥಾನದಲ್ಲಿ ನಿರೀಕ್ಷಿಸಬಹುದಾದಂಥ ಶಿಸ್ತು ಯಥಾವತ್ತಾಗಿ ಮೂಡಿ ಬಂದಿವೆ. ಇದೇ ಅನುಭವ ಚಿತ್ರಗಳಲ್ಲಿ ಮೂಡಿ ಬಂದಿರುವ ಪ್ರಾಣಿಗಳಾದ ಆನೆ, ಕುದುರೆ, ಒಂಟೆ ಮುಂತಾದವುಗಳಲ್ಲಿಯೂ ಸಹ ಉಂಟಾಗುತ್ತದೆ. ಅವೆಲ್ಲಾ

ಕಾಡಿನಲ್ಲಿ ಸ್ವೇಚ್ಛೆಯಿಂದ ಬೆಳೆದ ಮೃಗಗಳಂತೂ ಅಲ್ಲ ಎಂಬುದು ನಿಶ್ಚಿತ. ಅವು ಪಳಗಿದ ಪ್ರಾಣಿಗಳು. ಆದ್ದರಿಂದ ಅವುಗಳಲ್ಲಿಯೂ ಒಂದು ಶಿಸ್ತು ಎದ್ದು ಕಾಣುತ್ತದೆ. ಅಷ್ಟೇ ಸುಸ್ಪಷ್ಟ ಅರಮನೆಯ ಪರಿಸರದ ಚಿತ್ರಣ. ಎಲ್ಲ ಚಿರಪರಿಚಿತ ಸೌಂದರ್ಯ ದೃಷ್ಟಿಯನ್ನು ಈ ಎಲ್ಲವುಗಳಲ್ಲಿಯೂ ಕಾಣಬಹುದು.

ಈ ಚಿತ್ರಣದಲ್ಲಿ ಗಮನಿಸಬೇಕಾದ ಮತ್ತೊಂದು ಮುಖ್ಯ ಅಂಶವೆಂದರೆ ಅದು ವ್ಯಕ್ತಿ ಚಿತ್ರಣದಲ್ಲಿನ ಅಪರೂಪ ಆಕರ್ಷಣೆ. ಇಲ್ಲಿ ನಮೂದಿಸಲಾಗಿರುವ ವ್ಯಕ್ತಿಗಳೆಲ್ಲಾ ಕೃತಕವಲ್ಲ, ಇವರೆಲ್ಲಾ ನಿಜಜೀವನದಿಂದಲೇ ಆರಿಸಲ್ಪಟ್ಟವರು. ಇವರನ್ನು ಚಿತ್ರಿಸಿದ ಕಲಾವಿದರಿಗೆ ಅವರುಗಳು ಎಷ್ಟು ಪರಿಚಿತರೋ, ಆ ಕಾಲದ ದರ್ಶಕರಿಗೂ ಅಷ್ಟೇ ಚಿರಪರಿಚಿತ. ಅದರಲ್ಲಿ ರಾಜುರವರ ಬಳಗದವರನ್ನು ಕಾಣಬಹುದು. ಅವರೇ ಹೇಳುವಂತೆ, ಅವರು ತಮ್ಮ ಚಿಕ್ಕಪ್ಪ, ತಮ್ಮ ಮಕ್ಕಳು ಮುಂತಾದವರನ್ನೆಲ್ಲಾ ದಸರಾ ಮೆರವಣಿಗೆಯಲ್ಲಿ ನಿಲ್ಲುವಂತೆ ಮಾಡಿ ಈ ಸಂಯೋಜನೆಯನ್ನು ತಯಾರಿಸಿದ್ದಾರೆ. ರಾಜಮನೆತನವನ್ನು ನಿರೂಪಿಸುವಲ್ಲಿಯೂ ಇದೇ ವಿಧಾನವನ್ನು ಅನುಸರಿಸ ಲಾಗಿದೆ. ಎಂತಲೇ ಆ ಚಿತ್ರಗಳನ್ನು ನೋಡುತ್ತಿದ್ದಂತೆ ಅವುಗಳಲ್ಲಿ ಉದ್ಭವಿಸಿರುವ ವ್ಯಕ್ತಿಗಳ ಸ್ಥಾನಮಾನ ಮತ್ತು ಮಹತ್ವಗಳೂ ಸೂಕ್ಷ್ಮವಾಗಿ ಪರಿಚಯವಾಗಲು ಸಾಕು.

ಇಂತಹ ಹಿನ್ನೆಲೆಯಲ್ಲಿ ತಮ್ಮ ಕಲಾ ದೃಷ್ಟಿಯನ್ನು ಬೆಳೆಸಿಕೊಂಡು, ತಮ್ಮ ವ್ಯಕ್ತಿತ್ವವನ್ನೇ ಸೌಂದರ್ಯ ಉಪಾಸನೆಗೆ ಮುಡಿಪಾಗಿಟ್ಟಿರುವಂತಿರುವ ಆ ತಲೆಮಾರಿನ ಕಲಾವಿದರನ್ನು, ಇಂದಿನ ಎಂದರೆ ಸಮಕಾಲೀನ ಕಲೆಯ ವೈಪರೀತ್ಯಗಳನ್ನೂ ಒಪ್ಪುವಂತೆ ನಿರೀಕ್ಷಿಸುವುದು ನ್ಯಾಯವೇ? ಆದರೂ ಸುಬ್ರಮಣ್ಯರಾಜು ಇದರಲ್ಲೂ ತಮ್ಮ ಸಂಯಮತೆಯನ್ನು ಪ್ರದರ್ಶಿಸಿದ್ದಾರೆ. ಈಗ್ಗೆ ಕೆಲವು ವರುಷಗಳ ಹಿಂದೆ ಬೆಂಗಳೂರಿನಲ್ಲಿ ಜರುಗಿದ ಪಿಕಾಸೋರನ್ನು ಕುರಿತ ಒಂದು ಸಂಕಿರಣದಲ್ಲಿ, ಆ ಕಲಾವಿದನ ಬಗ್ಗೆ ಅಹಿತವಾದ ಅಭಿಪ್ರಾಯವನ್ನೂ ಸೂಚಿಸಿದ್ದರೂ ಇಂದು ಅವರ ದೃಷ್ಟಿ ಸ್ವಲ್ಪ ಮೃದುವಾಗಿದೆ ಎಂತಲೇ ಹೇಳಬೇಕು. ಎಂದರೆ ಸಮಕಾಲೀನ ಕಲಾವಿದ ತನ್ನದೇ ಆದ ಒಂದು ಕಲಾಪ್ರಪಂಚವನ್ನು ಸೃಷ್ಟಿಸಲು ಸಾಧ್ಯವಾಗಿದೆ ಎನ್ನುವುದನ್ನು ಅವರು ಒಪ್ಪುತ್ತಾರೆ. ಆ ಕೃತಿ ನೋಡುವವನಿಗೆ ಸಂತೋಷದಾಯಕವಾಗಲಿ, ಅದರಿಂದ ಓಡಿ ಹೋಗದಂತೆ ಮೂಡಿಬರಲಿ ಎಂಬುದೇ ಅವರ ತರ್ಕ. ಈ ಕಾರಣದಿಂದ ಅವರು "ಭಾರತೀಯ ಕಲೆ ಸ್ವರ್ಗದತ್ತ ಸಾಗುವ ಸಾಧನೆ" ಎಂಬ ಹಾವೆಲ್‌ರ ವಿವರಣೆಯನ್ನು ಮೆಚ್ಚಿಕೊಂಡಿದ್ದಾರೆ. ಅಷ್ಟೇ ಅಲ್ಲ ಅವರೂ ಸಮಕಾಲೀನ ಶೈಲಿಗೆ ಸರಿಹೋಗುವಂತಹ ಒಂದೆರಡು ಪ್ರಯೋಗಗಳನ್ನು ಮಾಡಿದ್ದಾರೆ. ಅವು ವ್ಯಕ್ತಿಚಿತ್ರಣ. ಆದ್ದರಿಂದ ಅವುಗಳಲ್ಲಿ ಸ್ವಾಭಾವಿಕವಾಗಿ ಮೂಡಿ ಬರುವ ನೈಜತೆ ಎದ್ದು ನಿಂತು, ಅದರ ರಚನಾ ವೈಖರಿಯಲ್ಲಿ ಮಾತ್ರ ಸ್ವಲ್ಪ ಗಡಸು ಕಂಡುಬರುವುದೇ ಹೊರತು. ಮಿಕ್ಕೆಲ್ಲಾ ವಿಧದಲ್ಲಿಯೂ ರಾಜುರ ಕೈವಾಡ ಸುಸ್ಪಷ್ಟ!

ಎಂದರೆ, ಅಕಾಡೆಮಿಕ್ ಮತ್ತು ಸೌಂದರ್ಯಪ್ರಜ್ಞೆಯ ಅವಾಂತರಗಳಲ್ಲಿ ಕಲೆತು, ಸಾಂಪ್ರದಾಯ ಶೈಲಿಯ ಸಂಸ್ಕಾರದಲ್ಲಿ ಬೆಳೆದು ಅಂತಹ ವಾತಾವರಣದಲ್ಲಿಯೇ ಪರಿಪಕ್ವತೆಯನ್ನು

ಹೊಂದಿದ್ದರೂ, ರಾಜು ಆಗಿಂದಾಗ ಉಂಟಾಗುತ್ತಿರುವ ಅನಿವಾರ್ಯದ ಮಾರ್ಪಾಡುಗಳ ಗದ್ದಲಗಳಿಗೆ ಸಿಲುಕಿದ್ದರೂ ಅವರು ತಮ್ಮ ಸ್ವಂತಿಕೆಯನ್ನು ಹೇಗೆ ಬೆಳೆಸಿಕೊಂಡು ತಮ್ಮ ಸ್ವಧರ್ಮವನ್ನು ಹೇಗೆ ಕಾಪಾಡಿಕೊಂಡು ಬಂದರು ಎಂಬುದೂ ಇಲ್ಲಿ ಅಷ್ಟೇ ಗಮನಾರ್ಹ. ಕಲೆಯಲ್ಲಿ ಇಂತಹ ಮಾರ್ಪಾಡುಗಳು ಅನಿವಾರ್ಯ. ಅದರಲ್ಲೂ ಯಂತ್ರಗಳ ಪ್ರಭಾವದ ಈ ಯುಗದಲ್ಲಿ ಇಂತಹ ಮಾರ್ಪಾಡುಗಳು ಮತ್ತೂ ಹೆಚ್ಚು. ಆದರೆ ಇಂದೇ ಆಗಲಿ ಎಂದೇ ಆಗಲಿ ಒಬ್ಬ ಮೈಕಲ್ ಎಂಜಲೋ, ಒಬ್ಬ ಡಾವಿಂಚಿ ಅಥವಾ ಗೇನ್ಸ್‌ಬರೋ ಅಥವಾ ಕಾನ್‌ಸ್ಟೇಬಲ್‌ರಂತಹ ಮಹಾಮಹಿಮರನ್ನೂ ಅಲ್ಲಗಳೆಯಲು ಸಾಧ್ಯವೇ? ಹಾಗೆಯೇ ನಮ್ಮ ನಾಡಿನ ಸಂಸ್ಕೃತಿಯನ್ನು ಬೆಳಗಿಸಿದ ಅನೇಕಾನೇಕ ಚಿತ್ರಕಾರರು, ಶಿಲ್ಪಿಗಳನ್ನೂ ಅಲ್ಲಗಳೆಯುವುದು ನ್ಯಾಯವೇ? ಈ ಪಂಕ್ತಿಗೆ ಸೇರಿದವರೇ ಒಬ್ಬ ವೆಂಕಟಪ್ಪ, ಒಬ್ಬ ದಂಡಾವತಿ ಮಠ. ಒಬ್ಬ ಸುಬ್ರಮಣ್ಯರಾಜು ಕೂಡ. ಅವರುಗಳು ಅಂದಿಗೂ ಮಾನ್ಯ ಇಂದಿಗೂ ಮಾನ್ಯ.

### ಎಲ್ಲೆಡೆ ಮಾನ್ಯ

ರಾಜುರವರು ಸಂಯೋಜನೆಯಲ್ಲಿ ಪಳಗಿದಂತೆ, ವ್ಯಕ್ತಿಚಿತ್ರದಲ್ಲೂ ನುರಿತ ಹಸ್ತರು. ಆದರೆ ಈ ಮಾಧ್ಯಮವನ್ನು ಅವರು ಹೆಚ್ಚಾಗಿ ಬಳಸಿಲ್ಲ. ಅವರ ಕೃತಿ ರಚನೆ ಅಲಂಕರಣೀಯ ಸಂಯೋಜನೆಗಳಿಗೆ ಸೀಮಿತ. ಇದರಲ್ಲಿ ಪರಂಪರಾನುಗತವಾಗಿ ಮೈಗೂಡಿಸಿಕೊಂಡ ಸಾಂಪ್ರದಾಯಿಕ ಶೈಲಿಯೂ ಸೇರಿದೆ. ಇಂತಹ ಇವರ ಕೃತಿಗಳು ವಿಶ್ವದ ಎಲ್ಲೆಡೆಯಲ್ಲೂ ಮಾನ್ಯತೆ ಪಡೆದಿವೆ. ಪಡೆಯುವತ್ತಲೂ ಇವೆ. ದೇಶ ವಿದೇಶಗಳಿಂದ ಮೇಲಿಂದ ಮೇಲೆ ಚಿತ್ರಕಲಾ ಪರಿಷತ್ತಿಗೆ ಭೇಟಿ ಕೊಡುತ್ತಿರುವ ಪ್ರತಿಷ್ಠಿತರೆಲ್ಲಾ ಹೆಚ್ಚಾಗಿ ಆಕರ್ಷಿತರಾಗುವುದು, ಆಸಕ್ತಿ ವಹಿಸುವುದು ಇಂತಹ ಭಾರತಕ್ಕೆ ಹೆಸರಾದ ಚಿತ್ರಗಳಿಂದಲೇ. ಅವುಗಳಲ್ಲಿನ ವರ್ಣಗಳ ಸಾಂದ್ರತೆ, ಸೌಂದರ್ಯಪ್ರಜ್ಞೆ, ಅತಿ ಮಾನವ ವ್ಯಕ್ತಿತ್ವಗಳಲ್ಲದೇ, ಅವುಗಳಲ್ಲಿನ ಜೆಸ್ಸೋ ಮತ್ತು ಸ್ವರ್ಣ ರೇಖೆಗಳ ಹೆಚ್ಚುಗಾರಿಕೆಯಿಂದ ಉಂಟಾಗುವ ತಾಂತ್ರಿಕ ಮೌಲ್ಯಗಳಿಗೇ ಅವರು ಮಾರುಹೋಗುವುದು. ನಮಗೆ ಎಂದರೆ ಭಾರತೀಯರಿಗೆ ಇದೆಲ್ಲಾ ಎಷ್ಟೇ ಹಳೆಯದಾಗಿ ಕಂಡುಬಂದರೂ ವಿದೇಶಿಯರಿಗೆ ಇವೆಲ್ಲಾ ಹೊಸದು. ಇದರಲ್ಲಿ ಅವರು ಒಂದು ನವೀನತೆಯನ್ನು ಕಾಣುತ್ತಾರೆ. ಎಂತಲೇ ಆಕರ್ಷಿತರಾಗುತ್ತಾರೆ. ಈ ಕಾರಣದಿಂದಲೇ ಇವರ ಶಿಷ್ಯೆಯರಲ್ಲೊಬ್ಬರಾದ ಸರಸ್ವತಿ ಬಸವರಾಜು ಈಚೆಗೆ ಭಾರತೀಯ ಸಂಸ್ಕೃತಿಯನ್ನು ಕುರಿತ ಉತ್ಸವಗಳನ್ನು ಇಂಗ್ಲೆಂಡ್ ಮತ್ತು ಅಮೆರಿಕಾ ದೇಶಗಳಲ್ಲಿ ಆಚರಿಸಿದಾಗ ಆಹ್ವಾನಿಸಲ್ಪಟ್ಟರಲ್ಲದೇ, ಅವರ ಕೃತಿ ರಚನಾ ಸಾಮರ್ಥ್ಯಕ್ಕೆ, ಅವರ ಕೃತಿಗಳಿಗೆ ಬೇಡಿಕೆಗಳೂ ಅಪಾರವಾಗಿ ಒದಗಿ ಬಂದುವು. ಬರುತ್ತಲೂ ಇವೆ.

ಹೀಗೆ ರಾಜುರವರ ಕೀರ್ತಿ ದೇಶವಿದೇಶಗಳಲ್ಲಿ ಹಬ್ಬಿದೆ. ಅವರ ಶಿಷ್ಯರ ಕೃತಿಗಳಿಗೆ ಈಗ ಎಲ್ಲಿಲ್ಲದ ಆದರ. ಅವರ ದಸರಾ ಉತ್ಸವದ ಮಾದರಿಯಂತೂ ಲೆಕ್ಕವಿಲ್ಲದಷ್ಟು ಬಿಕರಿಯಾಗಿದೆ. ಅದಕ್ಕೆ ಬೇಡಿಕೆ ನಿಂತೇ ಇಲ್ಲವೆಂದರೂ ತಪ್ಪಲ್ಲ. ರಾಜುರವರು ಏಕವ್ಯಕ್ತಿ ಪ್ರದರ್ಶನಗಳನ್ನು ನಡೆಸಿಲ್ಲವಾದರೂ ರಾಜ್ಯ ಮತ್ತು ರಾಷ್ಟ್ರಮಟ್ಟದ ಅನೇಕಾನೇಕ ಪ್ರದರ್ಶನಗಳಲ್ಲಿ

ಭಾಗವಹಿಸಿದ್ದಾರೆ. ಅವುಗಳಲ್ಲಿ ಬಹುಮಾನ ಗಳಿಸದೇ ಹೋಗಿರುವ ಸಂದರ್ಭಗಳೇ ವಿರಳವೆನ್ನಬಹುದು. ಅವರು ಭಾಗವಹಿಸಿದ ಕಲಾಶಿಬಿರಗಳೂ ಕಡಿಮೆ ಇಲ್ಲ. ಇಂತಹ ಶಿಬಿರಗಳಲ್ಲಿ ಪ್ರಮುಖವಾದುವೆಂದರೆ 1976ರಲ್ಲಿ ಶ್ರೀರಂಗಪಟ್ಟಣದಲ್ಲಿ ರಾಜ್ಯ ಲಲಿತಕಲಾ ಅಕಾಡೆಮಿ ಏರ್ಪಡಿಸಿದ್ದ ಸಂದರ್ಭ. ಆ ಶಿಬಿರದಲ್ಲಿ ಮೈಸೂರಿನ ಸಾಂಪ್ರದಾಯಿಕ ಶೈಲಿಯನ್ನು ಪ್ರತಿನಿಧಿಸಿದ್ದ ಏಕೈಕ ಕಲಾವಿದ ಸುಬ್ರಮಣ್ಯರಾಜು. ಅದಕ್ಕೂ ಮುಖ್ಯವಾಗಿ ದೆಹಲಿಯ ಕುಶಲ ಕಲಾ ಮ್ಯೂಸಿಯಂರವರು 1982 ಜೂನ್ ತಿಂಗಳಲ್ಲಿ ಏರ್ಪಡಿಸಿದ್ದ ಶಿಬಿರ. ಅದರಲ್ಲಿ ರಾಜು ಕರ್ನಾಟಕದ ಭವ್ಯ ಸಾಂಪ್ರದಾಯಿಕ ಶೈಲಿಯನ್ನು ವಿವರಣೆಯೊಂದಿಗೆ ರಚಿಸಿದರು. ಆ ಸಮಯದಲ್ಲಿ ಭಾರತದ ಪ್ರಧಾನಿ ಇಂದಿರಾ ಗಾಂಧಿ ಶಿಬಿರಕ್ಕೆ ಆಗಮಿಸಿ ಮೈಸೂರು ಸಾಂಪ್ರದಾಯದ ಜೆಸ್ಸೋ ಮತ್ತು ಚಿನ್ನದ ರೇಖುಗಳ ಚಿತ್ರಣ ಮತ್ತು ಜಲವರ್ಣದಲ್ಲಿ ನೈಜವಾಗಿ ಚಿತ್ರಿತವಾದ ದಸರಾ ಮೆರವಣಿಗೆಗಳನ್ನು ವೀಕ್ಷಿಸಿ ತಮ್ಮ ಮೆಚ್ಚುಗೆಯನ್ನು ಸೂಚಿಸಿದರು. ಇತ್ತೀಚೆಗೆ ಮೈಸೂರಿನಲ್ಲಿ ರಾಜ್ಯ ಸರಕಾರದ ವತಿಯಿಂದ ನೆರವೇರಿಸಲ್ಪಟ್ಟ ವಿಶ್ವ ಕನ್ನಡ ಸಮ್ಮೇಳನದಲ್ಲಿ ರಾಜು ತಮ್ಮ ಕೈಚಳಕವನ್ನು ತೋರಿದರು. ಸಾರ್ಕ್ ಸಮ್ಮೇಳನದಲ್ಲಿ ನಡೆದ ಶಿಬಿರದ ಕಾರ್ಯವನ್ನಂತೂ ಮೊದಲೇ ವಿವರಿಸಲಾಗಿದೆ.

ರಾಜುರವರಿಗೆ ಸಂದ ಗೌರವಗಳು, ಸನ್ಮಾನಗಳು ಅಪಾರ. ಅವುಗಳಲ್ಲಿ ಮುಖ್ಯವಾದುವನ್ನು ವಿವರಿಸಿದರೇ ಅದು ಒಂದು ದೊಡ್ಡ ಪಟ್ಟಿಯಾಗುವುದು. ಇವರಿಗೆ ಮೊದಲು ಸಂದ ಬಹುಮಾನ ಇವರ ತಂದೆ ಎಲ್ಲಪ್ಪನವರ ವ್ಯಕ್ತಿಚಿತ್ರಣಕ್ಕೆ ಯುವರಾಜ ಬಹುಮಾನ. ಅಲ್ಲದೇ 1931ರಲ್ಲಿ ಮೈಸೂರಿನ ದಸರಾ ಮತ್ತು ತಿರುವಾಂಕೂರಿನ ಚಿತ್ರ ತಿರುಣಾಲ್ ಪ್ರದರ್ಶನಗಳಲ್ಲಿ ಮತ್ತು ಬೆಂಗಳೂರಿನ ಕಲಾ ಮಂದಿರದ ಪ್ರದರ್ಶನದಲ್ಲಿ ಚಿನ್ನದ ಪದಕ. ಹೀಗೆಯೇ ಸಿಮ್ಲಾದ, ಮುಂಬಯಿನ ಮತ್ತು ಮೈಸೂರಿನ ಲಲಿತಕಲಾ ಸಂಘಗಳಲ್ಲಿ ಬಹುಮಾನ. ದಸರಾ ವಸ್ತು ಪ್ರದರ್ಶನದಲ್ಲಂತೂ ಮೇಲಿಂದ ಮೇಲೆ ರಜತ ಮತ್ತು ಚಿನ್ನದ ಪದಕಗಳು ಬರುತ್ತಲೇ ಇದ್ದುವು.

ಇವರಿಗೆ ಸಂದಿರುವ ಪ್ರಶಸ್ತಿಗಳೂ ಅಷ್ಟೆ. 1970ರಲ್ಲಿ ವಿಧಾನ ಸೌಧದಲ್ಲಿ ಚಿತ್ರಕಲಾ ಪರಿಷತ್ತಿನ ಸನ್ಮಾನದಿಂದ ತೊಡಗಿ, 1972ರಲ್ಲಿ ರಾಜ್ಯೋತ್ಸವ ಸನ್ಮಾನ, 1973ರಲ್ಲಿ ಸೋಮವಂಶ ಆರ್ಯ ಕ್ಷತ್ರಿಯ ಸಮಾಜದಿಂದ ಸನ್ಮಾನ್ಯ ಮತ್ತು 'ಚಿತ್ರಕಲಾ ಪ್ರವೀಣ' ಎಂಬ ಬಿರುದು, 1977ರಲ್ಲಿ ರಾಜ್ಯ ಲಲಿತಕಲಾ ಅಕಾಡೆಮಿಯ ಸನ್ಮಾನ. ಅದೇ ವರ್ಷ ಯುವ ಬರಹಗಾರರು, ಕಲಾವಿದರ ಸಂಘದ ಸನ್ಮಾನ. ಅಲ್ಲದೆ 1985ರಲ್ಲಿ ದೆಹಲಿಯ ಅಯಫಾಕ್ಸ್‌ನ 'ಅರವತ್ತನ್ನು ದಾಟಿದ ಕಲಾವಿದರನ್ನು' ಸನ್ಮಾನಿಸಿದ ಸಮಾರಂಭವೂ ಕೂಡಿದೆ. ಆದರೆ ಕೇಂದ್ರ ಲಲಿತಕಲಾ ಅಕಾಡೆಮಿಯ ಗಮನಕ್ಕೆ ಇವರು ಬರದಿರುವುದು ವಿಷಾದನೀಯ.

ಸುಬ್ರಮಣ್ಯರಾಜುರಿಗೆ ದೇಶಪರ್ಯಟನವೆಂದರೆ ಬಹುಪ್ರಿಯ. ಕನ್ನಡ ನಾಡಿನ ದಕ್ಷಿಣದ ಎಲ್ಲಾ ಪ್ರಮುಖ ಸ್ಥಳಗಳನ್ನೂ ಅದರಲ್ಲೂ ತೀರ್ಥಕ್ಷೇತ್ರಗಳನ್ನೂ ನೋಡಿದ್ದಾರಲ್ಲದೇ ಕನ್ಯಾಕುಮಾರಿಯಿಂದ ಬದರಿಯವರೆಗೆ ದೇಶದ ಎಲ್ಲ ನೋಡಬಹುದಾದ ಊರುಗಳಿಗೂ

ಭೇಟಿಯಿತ್ತಿದ್ದಾರೆ. ಅವರು ಸಂಚರಿಸಿರುವ ಊರುಗಳನ್ನು ಹೇಳುತ್ತಾ ಹೋದರೆ ಅದೇ ಒಂದು ದೊಡ್ಡ ಪಟ್ಟಿಯಾಗಬಹುದು. ಅದರಲ್ಲೂ ಕಲೆಗೆ ಸಂಬಂಧಿಸಿದ ಯಾವ ಊರನ್ನು ಅವರು ನೋಡದೇ ಬಿಟ್ಟಿಲ್ಲ, ಅವುಗಳಲ್ಲಿ ಅನೇಕ ಕಡೆ ಆಕರ್ಷಕವಾದ ಭಿತ್ತಿಚಿತ್ರಗಳು ಅಥವಾ ರೇಖಾಚಿತ್ರಗಳು ಕಂಡು ಬಂದಲ್ಲಿ ಅವನ್ನು ಸ್ಕೆಚ್ ಮಾಡಿಕೊಳ್ಳದೆಯೂ ಬಿಟ್ಟಿಲ್ಲ.

ಹೀಗೆ ಸಂಗ್ರಹ ಮಾಡುವುದೂ ಅವರಿಗೆ ರಕ್ತಗತವಾಗಿ ಬಂದಿರುವ ಅಭ್ಯಾಸವೆಂದೂ ಹೇಳಬಹುದು. ಅವರು ಬಹಳ ಜಾಗರೂಕತೆಯಿಂದ ಕಾಪಾಡಿಕೊಂಡು ಬಂದಿರುವ ಅಳಿಲಿನ ಬಾಲದ ಕೂದಲಿನ ಕುಂಚಗಳಿಂದ ತಯಾರಾದ, ನಾಜೂಕಿನ 32 ಗಣಪತಿಗಳ ಚಿತ್ರಣ ಮತ್ತು ಅದೇ ಮಾದರಿಯ 27 ವಿಧವಾದ ಶಿವಲೀಲಾ ಮಾಲಿಕೆಗಳೇ ಸಾಕ್ಷಿ, ಅಲ್ಲದೇ ಅವರ ತಾತ ಸುಂದರಯ್ಯನವರಿಂದ ರಚಿತವಾದ ವ್ಯಕ್ತಿ ಚಿತ್ರಗಳು ಮತ್ತು 44 ಅಡಿ ಉದ್ದದ, ಜಲವರ್ಣದ ದಸರಾ ಮೆರವಣಿಗೆಯ ದೃಶ್ಯವೂ ಅವರ ಅಮೂಲ್ಯವಾದ ಸಂಗ್ರಹದಲ್ಲಿದೆ. ಈ ದಸರಾ ಚಿತ್ರಣವನ್ನು ಕರ್ನಾಟಕ ಸರ್ಕಾರದ, ಲಲಿತಕಲಾ ಅಕಾಡೆಮಿಯ ಅಥವಾ ಅವರು ಬೆರೆತು ಹೋಗಿರುವ ಚಿತ್ರಕಲಾ ಪರಿಷತ್ತಿನ ಮೂಲಕ ಪ್ರಕಟಣೆ ಮಾಡುವುದರಲ್ಲಿ ಉತ್ಸುಕರಾಗಿದ್ದಾರೆ. ಹಾಗೆ ಅದರಲ್ಲಿ ಅದು ಮುಂದಿನ ಜನಾಂಗಕ್ಕೆ ಅದರಲ್ಲೂ ಕಲಾ ವಿದ್ಯಾರ್ಥಿಗಳಿಗೆ ಸ್ಫೂರ್ತಿದಾಯಕವಾಗುವುದರಲ್ಲಿ ಸಂದೇಹವೂ ಇಲ್ಲ.

ಇಂತಹ ಪ್ರಯತ್ನವೊಂದು ಚಿತ್ರಕಲಾ ಪರಿಷತ್ತಿನಿಂದ ನಡೆದು ಅದು ಯಶಸ್ವಿಯಾಗಿ ಪರಿಣಮಿಸಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ಅದೇ ಮೈಸೂರು ಸಾಂಪ್ರದಾಯಿಕ ಕಲೆಯನ್ನು ಕುರಿತ ಪುಸ್ತಕ. ಈ ಪುಸ್ತಕವನ್ನು ಬರೆದವರು ಖ್ಯಾತ ಪ್ರಾಚ್ಯವಸ್ತು ಸಂಶೋಧಕ ಎಸ್.ಆರ್. ರಾವ್ ಮತ್ತು ಹಿರಿಯ ಕಲಾ ವಿಮರ್ಶಕ ಬಿ.ವಿ.ಕೆ. ಶಾಸ್ತ್ರಿಯವರುಗಳಾದವರೂ, ಅದಕ್ಕೆ ಬೇಕಾದ ವಿವರಣೆಗಳನ್ನು ಒದಗಿಸಿದವರು ಸುಬ್ರಮಣ್ಯರಾಜು. ಆ ಪುಸ್ತಕದ ಸಾರ್ಥಕತೆಯಲ್ಲಿ ಅವರಿಗೂ ಅಷ್ಟೇ ಪ್ರತಿಷ್ಠೆ ದೊರಕಬೇಕು, ಸಂದಿದೆ.

ಈ ತುಂಬು ಕಲಾಜೀವನಕ್ಕೆ ತಿಲಕಪ್ರಾಯವೆಂಬಂತೆ ಕೇಂದ್ರದ ಸಂಸ್ಕೃತಿ ಪೂರೈಕೆಯ ಶಾಖೆಯಿಂದ ರಾಜುರವರಿಗೆ, 1986 ಮಾರ್ಚಿ 1 ರಿಂದ ಎರಡು ವರ್ಷಗಳ ಫೆಲೋಷಿಪ್ ಒಂದು ದೊರಕಿದೆ. ಇದರಿಂದ ಅವರಿಗೆ ಮಾಹೆಯಾನ ರೂ. 2,000 ದೊರಕುತ್ತಿದೆ. ಈ ಅವಧಿಯಲ್ಲಿ ಅವರಿಂದ ಯಾವುದಾದರೂ ಮಹತ್ಕಾರ್ಯವನ್ನು ನಿರೀಕ್ಷಿಸಬಹುದು. ಇದೇ ಅವರ ಹಿತೈಷಿಗಳೆಲ್ಲರ ಆಸೆ. ಆ ಆಸೆಯನ್ನು ಪೂರೈಸುವರೇ ಎಂದು ಕಾದು ನೋಡಬೇಕಾಗಿದೆ.

ಇದು ಏನೇ ಇರಲಿ. ರಾಜುರವರದು ತುಂಬು ಜೀವನ, ಸುಖ ಸಂಸಾರ, ಅವರ ಪತ್ನಿ ಶಾರದಮ್ಮನವರು ಈ ಸುಖ ಸಾಮ್ರಾಜ್ಯದ ಸಮಭಾಗಿ. ಏಳು ಜನ ಗಂಡು ಮಕ್ಕಳು ಮತ್ತು ನಾಲ್ಕು ಹೆಣ್ಣುಮಕ್ಕಳ ಸುಖಸಂಸಾರ ನಡೆಸುತ್ತಿರುವುದನ್ನು ನೋಡಿ, ಸಂತೋಷಿಸುವ ಭಾಗ್ಯ ಅವರದು. ಮುಖ್ಯವಾಗಿ ಈ ಪುತ್ರ ಪುತ್ರಿ ಬಳಗದವರೆಲ್ಲಾ ಅನ್ಯೋನ್ಯವಾಗಿರುವುದು ಮತ್ತೂ ಆನಂದದಾಯಕ.

ಈ ಆನಂದ ರಾಜುರವರಿಗೆ ಶಾಶ್ವತವಾಗಿರಲಿ, ಆದರ್ಶಪ್ರಾಯವಾಗಲಿ ಎಂಬುದೇ ಅವರ ಶಿಷ್ಯವರ್ಗದ, ಹಿತೈಷಿಗಳ ಮತ್ತು ಮಿತ್ರವೃಂದದ ಹಾರೈಕೆ.



ಹೀಗೆ ಸುಗಮ ಜೀವನ ನಡೆಸಿದ ರಾಜುರವರಿಗೆ ಸಂದ ಆಘಾತ ಎಂದರೆ ಅವರ ಧರ್ಮಪತ್ನಿ ಶಾರದಮ್ಮನವರ ನಿಧನ. ಅದು ಸಂಭವಿಸಿದ್ದು ಸೆಪ್ಟೆಂಬರ್ 1989ರಲ್ಲಿ. ತಮ್ಮ ಇಳೀ ವಯಸ್ಸಿನಲ್ಲಿ ಐವತ್ತು ವರ್ಷಕ್ಕೂ ಮೀರಿ ತಮ್ಮ ಜೀವನ ಸಂಗಾತಿಯಾಗಿದ್ದವರ ಅಗಲಿಕೆ ರಾಜುರವರಿಗೆ ಅಸಹನೀಯ. ಆದರೆ ತಮ್ಮ ಎಂದಿನ ವೈರಾಗ್ಯಭಾವದಿಂದ ಈ ವ್ಯಥೆಯನ್ನು ನುಂಗಿಕೊಂಡರು. ಆಗ ಅವರಿಗೆ ಸಮಾಧಾನ ಒದಗಿಸಿದ ಸಾಧನವೆಂದರೆ, ಅವರ ಸೃಜನಶೀಲತೆ, ಮತ್ತೇ ಎಂದಿನ ಕೃತಿ ರಚನೆಯಲ್ಲಿ ಮುಳಗಿ ಈ ಅಗಲಿಕೆಯನ್ನು ನೀಗಿಕೊಳ್ಳುವಂತಾದುದು.

ಅಷ್ಟೇ ದುಃಖಪೂರ್ಣ 1991ರಲ್ಲಿ ಸಂಭವಿಸಿದ ರಾಜು ಅವರ ಎರಡನೆಯ ಪುತ್ರ ನಾಗೇಂದ್ರರಾಜುರ ಮರಣ. ಈ ಪುತ್ರಶೋಕ ರಾಜುರ ಮನಸ್ಥೈರ್ಯವನ್ನು ಅಲುಗಾಡಿಸಿತು. ಆತನ ಪತ್ನಿ ಮತ್ತು ತಾರುಣ್ಯದ ಅಂಚಿನಲ್ಲಿದ್ದ ಮೊಮ್ಮಕ್ಕಳನ್ನು ಸಂತೈಸುತ್ತ ತಮ್ಮ ದುಃಖವನ್ನು ನುಂಗಿಕೊಂಡರು. ಆಗಲೂ ಅವರಿಗೆ ಸಾಂತ್ವನವಿತ್ತು, ಸಮಾಧಾನ ತಂದುಕೊಳ್ಳಲು ಸಾಧಕವಾದುದು ಎಂದರೆ ಕೃತಿ ರಚನೆ. ಪರಿಷತ್ತಿನ ತಮ್ಮ ವಿಭಾಗದಲ್ಲಿ ನಿರಂತರವಾಗಿ ಕೃತಿ ರಚನೆಯಲ್ಲಿ ಮುಳುಗಿ ತಮ್ಮ ದುಃಖವನ್ನು ನಿವಾರಿಸಿಕೊಂಡರು. ಅಬ್ಬ ಎಂತಹ ಮನಃಶಾಂತಿಯ ಸಾಧನ ಈ ಕಲೆ!



ಕಾಡಿನಲ್ಲಿ ಸ್ವೇಚ್ಛೆಯಿಂದ ಬೆಳೆದ ಮೃಗಗಳಂತೂ ಅಲ್ಲ ಎಂಬುದು ನಿಶ್ಚಿತ. ಅವು ಪಳಗಿದ ಪ್ರಾಣಿಗಳು. ಆದ್ದರಿಂದ ಅವುಗಳಲ್ಲಿಯೂ ಒಂದು ಶಿಸ್ತು ಎದ್ದು ಕಾಣುತ್ತದೆ. ಅಷ್ಟೇ ಸುಸ್ಪಷ್ಟ ಅರಮನೆಯ ಪರಿಸರದ ಚಿತ್ರಣ. ಎಲ್ಲ ಚಿರಪರಿಚಿತ ಸೌಂದರ್ಯ ದೃಷ್ಟಿಯನ್ನು ಈ ಎಲ್ಲವುಗಳಲ್ಲಿಯೂ ಕಾಣಬಹುದು.

ಈ ಚಿತ್ರಣದಲ್ಲಿ ಗಮನಿಸಬೇಕಾದ ಮತ್ತೊಂದು ಮುಖ್ಯ ಅಂಶವೆಂದರೆ ಅದು ವ್ಯಕ್ತಿ ಚಿತ್ರಣದಲ್ಲಿನ ಅಪರೂಪ ಆಕರ್ಷಣೆ. ಇಲ್ಲಿ ನಮೂದಿಸಲಾಗಿರುವ ವ್ಯಕ್ತಿಗಳೆಲ್ಲಾ ಕೃತಕವಲ್ಲ, ಇವರೆಲ್ಲಾ ನಿಜಜೀವನದಿಂದಲೇ ಆರಿಸಲ್ಪಟ್ಟವರು. ಇವರನ್ನು ಚಿತ್ರಿಸಿದ ಕಲಾವಿದರಿಗೆ ಅವರುಗಳು ಎಷ್ಟು ಪರಿಚಿತರೋ, ಆ ಕಾಲದ ದರ್ಶಕರಿಗೂ ಅಷ್ಟೇ ಚಿರಪರಿಚಿತ. ಅದರಲ್ಲಿ ರಾಜುರವರ ಬಳಗದವರನ್ನು ಕಾಣಬಹುದು. ಅವರೇ ಹೇಳುವಂತೆ, ಅವರು ತಮ್ಮ ಚಿಕ್ಕಪ್ಪ, ತಮ್ಮ ಮಕ್ಕಳು ಮುಂತಾದವರನ್ನೆಲ್ಲಾ ದಸರಾ ಮೆರವಣಿಗೆಯಲ್ಲಿ ನಿಲ್ಲುವಂತೆ ಮಾಡಿ ಈ ಸಂಯೋಜನೆಯನ್ನು ತಯಾರಿಸಿದ್ದಾರೆ. ರಾಜಮನೆತನವನ್ನು ನಿರೂಪಿಸುವಲ್ಲಿಯೂ ಇದೇ ವಿಧಾನವನ್ನು ಅನುಸರಿಸ ಲಾಗಿದೆ. ಎಂತಲೇ ಆ ಚಿತ್ರಗಳನ್ನು ನೋಡುತ್ತಿದ್ದಂತೆ ಅವುಗಳಲ್ಲಿ ಉದ್ಭವಿಸಿರುವ ವ್ಯಕ್ತಿಗಳ ಸ್ಥಾನಮಾನ ಮತ್ತು ಮಹತ್ವಗಳೂ ಸೂಕ್ಷ್ಮವಾಗಿ ಪರಿಚಯವಾಗಲು ಸಾಕು.

ಇಂತಹ ಹಿನ್ನೆಲೆಯಲ್ಲಿ ತಮ್ಮ ಕಲಾ ದೃಷ್ಟಿಯನ್ನು ಬೆಳೆಸಿಕೊಂಡು, ತಮ್ಮ ವ್ಯಕ್ತಿತ್ವವನ್ನೇ ಸೌಂದರ್ಯ ಉಪಾಸನೆಗೆ ಮುಡಿಪಾಗಿಟ್ಟಿರುವಂತಿರುವ ಆ ತಲೆಮಾರಿನ ಕಲಾವಿದರನ್ನು, ಇಂದಿನ ಎಂದರೆ ಸಮಕಾಲೀನ ಕಲೆಯ ವೈಪರೀತ್ಯಗಳನ್ನೂ ಒಪ್ಪುವಂತೆ ನಿರೀಕ್ಷಿಸುವುದು ನ್ಯಾಯವೇ? ಆದರೂ ಸುಬ್ರಮಣ್ಯರಾಜು ಇದರಲ್ಲೂ ತಮ್ಮ ಸಂಯಮತೆಯನ್ನು ಪ್ರದರ್ಶಿಸಿದ್ದಾರೆ. ಈಗ್ಗೆ ಕೆಲವು ವರುಷಗಳ ಹಿಂದೆ ಬೆಂಗಳೂರಿನಲ್ಲಿ ಜರುಗಿದ ಪಿಕಾಸೋರನ್ನು ಕುರಿತ ಒಂದು ಸಂಕಿರಣದಲ್ಲಿ ಆ ಕಲಾವಿದನ ಬಗ್ಗೆ ಅಹಿತವಾದ ಅಭಿಪ್ರಾಯವನ್ನೂ ಸೂಚಿಸಿದ್ದರೂ ಇಂದು ಅವರ ದೃಷ್ಟಿ ಸ್ವಲ್ಪ ಮೃದುವಾಗಿದೆ ಎಂತಲೇ ಹೇಳಬೇಕು. ಎಂದರೆ ಸಮಕಾಲೀನ ಕಲಾವಿದ ತನ್ನದೇ ಆದ ಒಂದು ಕಲಾಪ್ರಪಂಚವನ್ನು ಸೃಷ್ಟಿಸಲು ಸಾಧ್ಯವಾಗಿದೆ ಎನ್ನುವುದನ್ನು ಅವರು ಒಪ್ಪುತ್ತಾರೆ. ಆ ಕೃತಿ ನೋಡುವವನಿಗೆ ಸಂತೋಷದಾಯಕವಾಗಲಿ, ಅದರಿಂದ ಓಡಿ ಹೋಗದಂತೆ ಮೂಡಿಬರಲಿ ಎಂಬುದೇ ಅವರ ತರ್ಕ. ಈ ಕಾರಣದಿಂದ ಅವರು "ಭಾರತೀಯ ಕಲೆ ಸ್ವರ್ಗದತ್ತ ಸಾಗುವ ಸಾಧನೆ" ಎಂಬ ಹಾವೆಲ್‌ರ ವಿವರಣೆಯನ್ನು ಮೆಚ್ಚಿಕೊಂಡಿದ್ದಾರೆ. ಅಷ್ಟೇ ಅಲ್ಲ ಅವರೂ ಸಮಕಾಲೀನ ಶೈಲಿಗೆ ಸರಿಹೋಗುವಂತಹ ಒಂದೆರಡು ಪ್ರಯೋಗಗಳನ್ನು ಮಾಡಿದ್ದಾರೆ. ಅವು ವ್ಯಕ್ತಿಚಿತ್ರಣ. ಆದ್ದರಿಂದ ಅವುಗಳಲ್ಲಿ ಸ್ವಾಭಾವಿಕವಾಗಿ ಮೂಡಿ ಬರುವ ನೈಜತೆ ಎದ್ದು ನಿಂತು, ಅದರ ರಚನಾ ವೈಖರಿಯಲ್ಲಿ ಮಾತ್ರ ಸ್ವಲ್ಪ ಗಡಸು ಕಂಡುಬರುವುದೇ ಹೊರತು. ಮಿಕ್ಕೆಲ್ಲಾ ವಿಧದಲ್ಲಿಯೂ ರಾಜುರ ಕೈವಾಡ ಸುಸ್ಪಷ್ಟ!

ಎಂದರೆ, ಅಕಾಡೆಮಿಕ್ ಮತ್ತು ಸೌಂದರ್ಯಪ್ರಜ್ಞೆಯ ಅವಾಂತರಗಳಲ್ಲಿ ಕಲೆತು, ಸಾಂಪ್ರದಾಯ ಶೈಲಿಯ ಸಂಸ್ಕಾರದಲ್ಲಿ ಬೆಳೆದು ಅಂತಹ ವಾತಾವರಣದಲ್ಲಿಯೇ ಪರಿಪಕ್ವತೆಯನ್ನು

ಹೊಂದಿದ್ದರೂ, ರಾಜು ಆಗಿಂದಾಗ ಉಂಟಾಗುತ್ತಿರುವ ಅನಿವಾರ್ಯದ ಮಾರ್ಪಾಡುಗಳ ಗದ್ದಲಗಳಿಗೆ ಸಿಲುಕಿದ್ದರೂ ಅವರು ತಮ್ಮ ಸ್ವಂತಿಕೆಯನ್ನು ಹೇಗೆ ಬೆಳೆಸಿಕೊಂಡು ತಮ್ಮ ಸ್ವಧರ್ಮವನ್ನು ಹೇಗೆ ಕಾಪಾಡಿಕೊಂಡು ಬಂದರು ಎಂಬುದೂ ಇಲ್ಲಿ ಅಷ್ಟೇ ಗಮನಾರ್ಹ. ಕಲೆಯಲ್ಲಿ ಇಂತಹ ಮಾರ್ಪಾಡುಗಳು ಅನಿವಾರ್ಯ. ಅದರಲ್ಲೂ ಯಂತ್ರಗಳ ಪ್ರಭಾವದ ಈ ಯುಗದಲ್ಲಿ ಇಂತಹ ಮಾರ್ಪಾಡುಗಳು ಮತ್ತೂ ಹೆಚ್ಚು. ಆದರೆ ಇಂದೇ ಆಗಲಿ ಎಂದೇ ಆಗಲಿ ಒಬ್ಬ ಮೈಕಲ್ ಎಂಜಲೋ, ಒಬ್ಬ ಡಾವಿಂಚಿ ಅಥವಾ ಗೇನ್ಸ್‌ಬರೋ ಅಥವಾ ಕಾನ್ಸ್‌ಟೇಬಲ್‌ರಂತಹ ಮಹಾಮಹಿಮರನ್ನೂ ಅಲ್ಲಗಳೆಯಲು ಸಾಧ್ಯವೇ? ಹಾಗೆಯೇ ನಮ್ಮ ನಾಡಿನ ಸಂಸ್ಕೃತಿಯನ್ನು ಬೆಳಗಿಸಿದ ಅನೇಕಾನೇಕ ಚಿತ್ರಕಾರರು, ಶಿಲ್ಪಿಗಳನ್ನೂ ಅಲ್ಲಗಳೆಯುವುದು ನ್ಯಾಯವೇ? ಈ ಪಂಕ್ತಿಗೆ ಸೇರಿದವರೇ ಒಬ್ಬ ವೆಂಕಟಪ್ಪ, ಒಬ್ಬ ದಂಡಾವತಿ ಮಠ. ಒಬ್ಬ ಸುಬ್ರಮಣ್ಯರಾಜು ಕೂಡ. ಅವರುಗಳು ಅಂದಿಗೂ ಮಾನ್ಯ ಇಂದಿಗೂ ಮಾನ್ಯ.

## ಎಲ್ಲೆಡೆ ಮಾನ್ಯ

ರಾಜುರವರು ಸಂಯೋಜನೆಯಲ್ಲಿ ಪಳಗಿದಂತೆ, ವ್ಯಕ್ತಿಚಿತ್ರದಲ್ಲೂ ನುರಿತ ಹಸ್ತರು. ಆದರೆ ಈ ಮಾಧ್ಯಮವನ್ನು ಅವರು ಹೆಚ್ಚಾಗಿ ಬಳಸಿಲ್ಲ. ಅವರ ಕೃತಿ ರಚನೆ ಅಲಂಕರಣೀಯ ಸಂಯೋಜನೆಗಳಿಗೆ ಸೀಮಿತ. ಇದರಲ್ಲಿ ಪರಂಪರಾನುಗತವಾಗಿ ಮೈಗೂಡಿಸಿಕೊಂಡ ಸಾಂಪ್ರದಾಯಿಕ ಶೈಲಿಯೂ ಸೇರಿದೆ. ಇಂತಹ ಇವರ ಕೃತಿಗಳು ವಿಶ್ವದ ಎಲ್ಲೆಡೆಯಲ್ಲೂ ಮಾನ್ಯತೆ ಪಡೆದಿವೆ. ಪಡೆಯುವತ್ತಲೂ ಇವೆ. ದೇಶ ವಿದೇಶಗಳಿಂದ ಮೇಲಿಂದ ಮೇಲೆ ಚಿತ್ರಕಲಾ ಪರಿಷತ್ತಿಗೆ ಭೇಟಿ ಕೊಡುತ್ತಿರುವ ಪ್ರತಿಷ್ಠಿತರೆಲ್ಲಾ ಹೆಚ್ಚಾಗಿ ಆಕರ್ಷಿತರಾಗುವುದು, ಆಸಕ್ತಿ ವಹಿಸುವುದು ಇಂತಹ ಭಾರತಕ್ಕೆ ಹೆಸರಾದ ಚಿತ್ರಗಳಿಂದಲೇ. ಅವುಗಳಲ್ಲಿನ ವರ್ಣಗಳ ಸಾಂದ್ರತೆ, ಸೌಂದರ್ಯಪ್ರಜ್ಞೆ, ಅತಿ ಮಾನವ ವ್ಯಕ್ತಿತ್ವಗಳಲ್ಲದೇ, ಅವುಗಳಲ್ಲಿನ ಜೆಸ್ಸೋ ಮತ್ತು ಸ್ವರ್ಣ ರೇಖೆಗಳ ಹೆಚ್ಚುಗಾರಿಕೆಯಿಂದ ಉಂಟಾಗುವ ತಾಂತ್ರಿಕ ಮೌಲ್ಯಗಳಿಗೇ ಅವರು ಮಾರುಹೋಗುವುದು. ನಮಗೆ ಎಂದರೆ ಭಾರತೀಯರಿಗೆ ಇದೆಲ್ಲಾ ಎಷ್ಟೇ ಹಳೆಯದಾಗಿ ಕಂಡುಬಂದರೂ ವಿದೇಶಿಯರಿಗೆ ಇವೆಲ್ಲಾ ಹೊಸದು. ಇದರಲ್ಲಿ ಅವರು ಒಂದು ನವೀನತೆಯನ್ನು ಕಾಣುತ್ತಾರೆ. ಎಂತಲೇ ಆಕರ್ಷಿತರಾಗುತ್ತಾರೆ. ಈ ಕಾರಣದಿಂದಲೇ ಇವರ ಶಿಷ್ಯೆಯರಲ್ಲೊಬ್ಬರಾದ ಸರಸ್ವತಿ ಬಸವರಾಜು ಈಚೆಗೆ ಭಾರತೀಯ ಸಂಸ್ಕೃತಿಯನ್ನು ಕುರಿತ ಉತ್ಸವಗಳನ್ನು ಇಂಗ್ಲೆಂಡ್ ಮತ್ತು ಅಮೆರಿಕಾ ದೇಶಗಳಲ್ಲಿ ಆಚರಿಸಿದಾಗ ಆಹ್ವಾನಿಸಲ್ಪಟ್ಟರಲ್ಲದೇ, ಅವರ ಕೃತಿ ರಚನಾ ಸಾಮರ್ಥ್ಯಕ್ಕೆ, ಅವರ ಕೃತಿಗಳಿಗೆ ಬೇಡಿಕೆಗಳೂ ಅಪಾರವಾಗಿ ಒದಗಿ ಬಂದುವು. ಬರುತ್ತಲೂ ಇವೆ.

ಹೀಗೆ ರಾಜುರವರ ಕೀರ್ತಿ ದೇಶವಿದೇಶಗಳಲ್ಲಿ ಹಬ್ಬಿದೆ. ಅವರ ಶಿಷ್ಯರ ಕೃತಿಗಳಿಗೆ ಈಗ ಎಲ್ಲಿಲ್ಲದ ಆದರ. ಅವರ ದಸರಾ ಉತ್ಸವದ ಮಾದರಿಯಂತೂ ಲೆಕ್ಕವಿಲ್ಲದಷ್ಟು ಬಿಕರಿಯಾಗಿದೆ. ಅದಕ್ಕೆ ಬೇಡಿಕೆ ನಿಂತೇ ಇಲ್ಲವೆಂದರೂ ತಪ್ಪಲ್ಲ. ರಾಜುರವರು ಏಕವ್ಯಕ್ತಿ ಪ್ರದರ್ಶನಗಳನ್ನು ನಡೆಸಿಲ್ಲವಾದರೂ ರಾಜ್ಯ ಮತ್ತು ರಾಷ್ಟ್ರಮಟ್ಟದ ಅನೇಕಾನೇಕ ಪ್ರದರ್ಶನಗಳಲ್ಲಿ

ಭಾಗವಹಿಸಿದ್ದಾರೆ. ಅವುಗಳಲ್ಲಿ ಬಹುಮಾನ ಗಳಿಸದೇ ಹೋಗಿರುವ ಸಂದರ್ಭಗಳೇ ವಿರಳವೆನ್ನಬಹುದು. ಅವರು ಭಾಗವಹಿಸಿದ ಕಲಾಶಿಬಿರಗಳೂ ಕಡಿಮೆ ಇಲ್ಲ. ಇಂತಹ ಶಿಬಿರಗಳಲ್ಲಿ ಪ್ರಮುಖವಾದುವೆಂದರೆ 1976ರಲ್ಲಿ ಶ್ರೀರಂಗಪಟ್ಟಣದಲ್ಲಿ ರಾಜ್ಯ ಲಲಿತಕಲಾ ಅಕಾಡೆಮಿ ಏರ್ಪಡಿಸಿದ್ದ ಸಂದರ್ಭ. ಆ ಶಿಬಿರದಲ್ಲಿ ಮೈಸೂರಿನ ಸಾಂಪ್ರದಾಯಿಕ ಶೈಲಿಯನ್ನು ಪ್ರತಿನಿಧಿಸಿದ್ದ ಏಕೈಕ ಕಲಾವಿದ ಸುಬ್ರಮಣ್ಯರಾಜು. ಅದಕ್ಕೂ ಮುಖ್ಯವಾಗಿ ದೆಹಲಿಯ ಕುಶಲ ಕಲಾ ಮ್ಯೂಸಿಯಂರವರು 1982 ಜೂನ್ ತಿಂಗಳಲ್ಲಿ ಏರ್ಪಡಿಸಿದ್ದ ಶಿಬಿರ. ಅದರಲ್ಲಿ ರಾಜು ಕರ್ನಾಟಕದ ಭವ್ಯ ಸಾಂಪ್ರದಾಯಿಕ ಶೈಲಿಯನ್ನು ವಿವರಣೆಯೊಂದಿಗೆ ರಚಿಸಿದರು. ಆ ಸಮಯದಲ್ಲಿ ಭಾರತದ ಪ್ರಧಾನಿ ಇಂದಿರಾ ಗಾಂಧಿ ಶಿಬಿರಕ್ಕೆ ಆಗಮಿಸಿ ಮೈಸೂರು ಸಾಂಪ್ರದಾಯದ ಜೆಸ್ಸೋ ಮತ್ತು ಚಿನ್ನದ ರೇಖುಗಳ ಚಿತ್ರಣ ಮತ್ತು ಜಲವರ್ಣದಲ್ಲಿ ನೈಜವಾಗಿ ಚಿತ್ರಿತವಾದ ದಸರಾ ಮೆರವಣಿಗೆಗಳನ್ನು ವೀಕ್ಷಿಸಿ ತಮ್ಮ ಮೆಚ್ಚುಗೆಯನ್ನು ಸೂಚಿಸಿದರು. ಇತ್ತೀಚೆಗೆ ಮೈಸೂರಿನಲ್ಲಿ ರಾಜ್ಯ ಸರಕಾರದ ವತಿಯಿಂದ ನೆರವೇರಿಸಲ್ಪಟ್ಟ ವಿಶ್ವ ಕನ್ನಡ ಸಮ್ಮೇಳನದಲ್ಲಿ ರಾಜು ತಮ್ಮ ಕೈಚಳಕವನ್ನು ತೋರಿದರು. ಸಾರ್ಕ್ ಸಮ್ಮೇಳನದಲ್ಲಿ ನಡೆದ ಶಿಬಿರದ ಕಾರ್ಯವನ್ನಂತೂ ಮೊದಲೇ ವಿವರಿಸಲಾಗಿದೆ.

ರಾಜುರವರಿಗೆ ಸಂದ ಗೌರವಗಳು, ಸನ್ಮಾನಗಳು ಅಪಾರ. ಅವುಗಳಲ್ಲಿ ಮುಖ್ಯವಾದುವನ್ನು ವಿವರಿಸಿದರೇ ಅದು ಒಂದು ದೊಡ್ಡ ಪಟ್ಟಿಯಾಗುವುದು. ಇವರಿಗೆ ಮೊದಲು ಸಂದ ಬಹುಮಾನ ಇವರ ತಂದೆ ಎಲ್ಲಪ್ಪನವರ ವ್ಯಕ್ತಿಚಿತ್ರಣಕ್ಕೆ ಯುವರಾಜ ಬಹುಮಾನ. ಅಲ್ಲದೇ 1931ರಲ್ಲಿ ಮೈಸೂರಿನ ದಸರಾ ಮತ್ತು ತಿರುವಾಂಕೂರಿನ ಚಿತ್ರ ತಿರುಣಾಲ್ ಪ್ರದರ್ಶನಗಳಲ್ಲಿ ಮತ್ತು ಬೆಂಗಳೂರಿನ ಕಲಾ ಮಂದಿರದ ಪ್ರದರ್ಶನದಲ್ಲಿ ಚಿನ್ನದ ಪದಕ. ಹೀಗೆಯೇ ಸಿಮ್ಲಾದ, ಮುಂಬಯಿನ ಮತ್ತು ಮೈಸೂರಿನ ಲಲಿತಕಲಾ ಸಂಘಗಳಲ್ಲಿ ಬಹುಮಾನ. ದಸರಾ ವಸ್ತು ಪ್ರದರ್ಶನದಲ್ಲಂತೂ ಮೇಲಿಂದ ಮೇಲೆ ರಜತ ಮತ್ತು ಚಿನ್ನದ ಪದಕಗಳು ಬರುತ್ತಲೇ ಇದ್ದುವು.

ಇವರಿಗೆ ಸಂದಿರುವ ಪ್ರಶಸ್ತಿಗಳೂ ಅಷ್ಟೆ. 1970ರಲ್ಲಿ ವಿಧಾನ ಸೌಧದಲ್ಲಿ ಚಿತ್ರಕಲಾ ಪರಿಷತ್ತಿನ ಸನ್ಮಾನದಿಂದ ತೊಡಗಿ, 1972ರಲ್ಲಿ ರಾಜ್ಯೋತ್ಸವ ಸನ್ಮಾನ, 1973ರಲ್ಲಿ ಸೋಮವಂಶ ಆರ್ಯ ಕ್ಷತ್ರಿಯ ಸಮಾಜದಿಂದ ಸನ್ಮಾನ್ಯ ಮತ್ತು 'ಚಿತ್ರಕಲಾ ಪ್ರವೀಣ' ಎಂಬ ಬಿರುದು, 1977ರಲ್ಲಿ ರಾಜ್ಯ ಲಲಿತಕಲಾ ಅಕಾಡೆಮಿಯ ಸನ್ಮಾನ. ಅದೇ ವರ್ಷ ಯುವ ಬರಹಗಾರರು, ಕಲಾವಿದರ ಸಂಘದ ಸನ್ಮಾನ. ಅಲ್ಲದೆ 1985ರಲ್ಲಿ ದೆಹಲಿಯ ಅಯಫಾಕ್ಸ್‌ನ 'ಅರವತ್ತನ್ನು ದಾಟಿದ ಕಲಾವಿದರನ್ನು' ಸನ್ಮಾನಿಸಿದ ಸಮಾರಂಭವೂ ಕೂಡಿದೆ. ಆದರೆ ಕೇಂದ್ರ ಲಲಿತಕಲಾ ಅಕಾಡೆಮಿಯ ಗಮನಕ್ಕೆ ಇವರು ಬರದಿರುವುದು ವಿಷಾದನೀಯ.

ಸುಬ್ರಮಣ್ಯರಾಜುರಿಗೆ ದೇಶಪರ್ಯಟನವೆಂದರೆ ಬಹುಪ್ರಿಯ. ಕನ್ನಡ ನಾಡಿನ ದಕ್ಷಿಣದ ಎಲ್ಲಾ ಪ್ರಮುಖ ಸ್ಥಳಗಳನ್ನೂ ಅದರಲ್ಲೂ ತೀರ್ಥಕ್ಷೇತ್ರಗಳನ್ನೂ ನೋಡಿದ್ದಾರಲ್ಲದೇ ಕನ್ಯಾಕುಮಾರಿಯಿಂದ ಬದರಿಯವರೆಗೆ ದೇಶದ ಎಲ್ಲ ನೋಡಬಹುದಾದ ಊರುಗಳಿಗೂ

